# ನಮ್ಮ ಮಾನಸ

ಸಂಪುಟ : 3 ಜುಲೈ 2009 ಸಂಚಿಕೆ : 3



# ನಮ್ಮ ಮಾನಸ

ಜುಲೈ 2009
ಸಂಪುಟ : 3    ಸಂಚಿಕೆ : 3



*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*



*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*©: 26757159*





*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**
*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**


# ಅವರು ಮಹಿಳೆಯರೊಂದಿಗೆ ಅಧಿಕಾರ ಹಂಚಿಕೊಳ್ಳಲಾರರು




ಮಹಿಳಾ ಮೀಸಲಾತಿಯನ್ನು ಕುರಿತು ಇತ್ತೀಚೆಗೆ ಸಂಸತ್ತಿನಲ್ಲಿ ನಡೆದಂತಹ ಚರ್ಚೆ, ಭಾರತೀಯ ಪುರುಷರ ಮನಸ್ಸಿನಲ್ಲಿ ಸ್ತ್ರೀ ವಿರೋಧಿ ಧೋರಣೆ ಹೇಗೆ, ಹಾಗೂ ಎಷ್ಟರ ಮಟ್ಟಿಗೆ ಅಂತರ್ಗತವಾಗಿ ಬೇರು ಬಿಟ್ಟಿದೆ ಎಂಬುದಕ್ಕೆ ಒಂದು ನಿದರ್ಶನವಾಗಿದೆ. ದೇಶದ ಆಡಳಿತ ಚುಕ್ಕಾಣಿಯನ್ನು ಹಿಡಿಯ ಬಯಸುವ ರಾಜಕೀಯ ಪಕ್ಷದ ನಾಯಕರಲ್ಲಿರುವ ಈ ಧೋರಣೆಯನ್ನು ವಿಭಿನ್ನ ದೃಷ್ಟಿಯಿಂದಲೇ ವಿಶ್ಲೇಷಿಸಬೇಕಾಗುತ್ತದೆ.

ಹದಿಮೂರು ವರ್ಷಗಳಿಂದಲೂ ಮಹಿಳಾ ಮೀಸಲಾತಿಯ ಮಸೂದೆ ಚರ್ಚೆಯಾಗುತ್ತಲೇ ಬಂದಿದೆ. ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರ ರಾಜಕೀಯ ಪ್ರಾತಿನಿಧ್ಯಕ್ಕೆ ಅವಕಾಶ ನೀಡದೆ ಚರ್ಚೆ, ವಿವಾದಗಳ ಮೂಲಕ ಮುಂದೂಡುತ್ತಿರುವ ಪುರುಷ ರಾಜಕಾರಣದ ಹುನ್ನಾರವೇನು ಎಂಬುದರ ಕಾರಣಗಳು ಸ್ಪಷ್ಟವಾಗಿವೆ. ಶರದ್ ಯಾದವ್, ಮುಲಾಯಂಸಿಂಗ್ ಯಾದವ್, ಲಾಲುಪ್ರಸಾದ್ ಯಾದವ್ ಜೊತೆಗೆ ಈಗ ಪಾಸ್ವಾನ್, ಜೆಡಿಯು ಹಾಗೂ ಶಿವಸೇನೆ ಪಟ್ಟಿಯಲ್ಲಿ ಸೇರಿವೆ. ಮಹಿಳೆಯರಿಗೆ ಶೇ. 33 ಮೀಸಲಾತಿ ನೀಡಿದ್ದೇ ಆದರೆ ತಾವು ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಬೆದರಿಕೆ ಹಾಕಿ, ಅನಂತರ ಆ ಬೆದರಿಕೆಯನ್ನು ವಾಪಸ್ ತೆಗೆದುಕೊಂಡರು. ಇಂತಹ ಕುತ್ಸಿತ, ಬ್ಲಾಕ್‌ಮೇಲ್ ತಂತ್ರದ ರಾಜಕಾರಣದ ಹಿಂದಿರುವ ಧೋರಣೆಗಳೇನು?

ಶೇ. 33ರಷ್ಟು ಮೀಸಲಾತಿಯನ್ನು ಈಗಾಗಲೇ ಸ್ಥಳೀಯ ಸಂಸ್ಥೆಗಳಿಗೆ ನೀಡಲಾಗಿದೆ. ಈ ಮೀಸಲಾತಿಯ ಅವಕಾಶದಿಂದ ಆಯ್ಕೆಯಾದ ಮಹಿಳೆಯರು ನಿಧಾನವಾಗಿ ರಾಜಕೀಯ ಪ್ರಕ್ರಿಯೆಯ ಭಾಗವಾಗುತ್ತಿದ್ದಾರೆ. ಪ್ರಾರಂಭದಲ್ಲಿ ಈ ಮಹಿಳೆಯರು ಪುರುಷರ ನೆರಳಿನಲ್ಲಿ 'ರಾಜಕೀಯ' ಮಾಡಿದರೂ, ಈಗ ಸನ್ನಿವೇಶ ಬದಲಾಗುತ್ತಿದೆ. ಸೂಕ್ತವಾದ ತರಬೇತಿ ಹಾಗೂ ಮಾಹಿತಿಯನ್ನು ಪಡೆದ ಮಹಿಳೆಯರು ಸ್ವತಂತ್ರವಾಗಿ ತಮ್ಮ ಅಧಿಕಾರವನ್ನು ಚಲಾಯಿಸುವುದರ ಜೊತೆಗೆ ಸಮಾಜಮುಖಿಯಾಗಿ ಕೆಲಸ ಮಾಡುತ್ತ ಜನರಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡುವಲ್ಲಿ ಶ್ಲಾಘನೀಯ ಕೆಲಸ ಮಾಡುತ್ತಿದ್ದಾರೆ. ಅವರು ಪುರುಷರಷ್ಟೇ ಅಥವಾ ಅವರಿಗಿಂತ ಸಮರ್ಥವಾಗಿ ಕೆಲಸ ಮಾಡಬಲ್ಲರು, ಜವಾಬ್ದಾರಿಯನ್ನು ನಿರ್ವಹಿಸಬಲ್ಲರು ಎಂಬುದಕ್ಕೆ ಸಾಕಷ್ಟು ನಿದರ್ಶನಗಳು ನಮ್ಮ ಮುಂದಿವೆ. ಸ್ಥಳೀಯ ಮಟ್ಟದಲ್ಲಿ ಅಧಿಕಾರ ಹಂಚಿಕೊಳ್ಳಲು ತಯಾರಿರುವ ಪುರುಷ ರಾಜಕಾರಣಿಗಳು ರಾಷ್ಟ್ರಮಟ್ಟದ ಹಾಗೂ ರಾಜ್ಯಮಟ್ಟದಲ್ಲಿ ಏಕೆ ಹಿಂಜರಿಯುತ್ತಿದ್ದಾರೆ ಎಂಬ ಪ್ರಶ್ನೆ ಮುಖ್ಯವಾದುದು. (ಈಚೆಗೆ ಸಭೆಯೊಂದರಲ್ಲಿ ಮಾಜಿ ಮಂತ್ರಿ, ಹಾಲಿ ಸಂಸದ ಎಚ್. ವಿಶ್ವನಾಥ್ ಮಹಿಳಾ ಮಂತ್ರಿಯೊಬ್ಬರ ಬಗ್ಗೆ ಆಡಿದ ಮಾತುಗಳನ್ನು ಗಮನಿಸಿದರೆ ಈ ಹಂಚಿಕೆಯ ಮಾತೂ ಸರಳವಾಗೇನಿಲ್ಲ) ತಾರೆ ಶ್ರುತಿ ಅವರನ್ನು ಪಕ್ಷಪ್ರಚಾರಕ್ಕೆ ಬಳಸಿಕೊಂಡು, ಒಂದು ಜವಾಬ್ದಾರಿಯನ್ನು ಕೊಟ್ಟಂತೆ ಮಾಡಿ, ವೈಯಕ್ತಿಕ ಸಮಸ್ಯೆಗಳನ್ನು ಕಾರಣವಾಗಿಟ್ಟುಕೊಂಡು ಕೊಟ್ಟಿದ್ದ ಅಧಿಕಾರವನ್ನು ಕಿತ್ತುಕೊಂಡು ಅಪಮಾನಿಸಿದ ಪ್ರಸಂಗ ಇತ್ತೀಚೆಗೆ ನಡೆದಿದೆ. ನೈತಿಕತೆ, ಸಮಾಜದ ಸ್ವಾಸ್ಥ್ಯ ಎಂದು ಬೊಬ್ಬಿಡುವ ನಕಲಿ 'ರಾಮ'ರಿಗೆ ನೈತಿಕತೆ ಅನ್ವಯವಾಗುವುದಿಲ್ಲವೇಕೆ?

ಒಳಮೀಸಲಾತಿಯ ಪ್ರಶ್ನೆ ಇಂದು ಕೇವಲ ನೆಪವಾಗಿರುವುದು ಸ್ಪಷ್ಟವಾಗಿದೆ. ಇಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಕೇವಲ ಮೇಲ್ವರ್ಗ, ಮೇಲ್ಜಾತಿಯ ಹಣಬಲದ, ಕುಟುಂಬ ರಾಜಕಾರಣ ಹಾಗು ಸಂಬಂಧಿ ಮಹಿಳೆಯರಿಗೆ ಅವಕಾಶ ಲಭ್ಯವಾಗುವುದು ಸ್ಪಷ್ಟ.

ಮೀಸಲಾತಿಯಲ್ಲಿ ಒಳ ಮೀಸಲಾತಿಯನ್ನು ನೀಡಿದರೆ ದಲಿತ ಹಿಂದುಳಿದ ಅಲ್ಪಸಂಖ್ಯಾತ ಮಹಿಳೆಯರಿಗೆ ಅವಕಾಶವನ್ನು ಕಲ್ಪಿಸಿ ಕೊಡಲಾಗುತ್ತದೆಯೆಂಬ ವಾದ ವಾಸ್ತವಕ್ಕೆ ಹತ್ತಿರವಾದುದು. ಒಳಮೀಸಲಾತಿಯ ಬಗ್ಗೆ ಹೆಚ್ಚು ದೀರ್ಘವಾಗಿ ಚಿಂತಿಸಿ, ಅಂತಹ ಅವಕಾಶವನ್ನು ಕಲ್ಪಿಸಿ ಕೊಡುವಂತಹ ಪೂರಕ ಚರ್ಚೆ, ಬೆಂಬಲಗಳಿಗೆ ಸಹಕಾರ ನೀಡಬೇಕಾಗುತ್ತದೆ. ಆದರೆ ಮೀಸಲಾತಿಯ ವಿರೋಧದ ಅಸ್ತ್ರ ಸಿನಿಕತನದಿಂದ ಕೂಡಿದೆ. ಕೇವಲ ಮೇಲ್ವರ್ಗದ 'ಕೂದಲು ಕತ್ತರಿಸಿದ' ಮಹಿಳೆಯರು ಆಯ್ಕೆಯಾಗಿ ಬರುತ್ತಾರೆಂಬ ಪೂರ್ವಾಗ್ರಹಪೀಡಿತ ಅಭಿಪ್ರಾಯಗಳು ಕಳೆದ ಹದಿಮೂರು ವರ್ಷಗಳಿಂದ ಸತತವಾಗಿ ಕೇಳಿಬರುತ್ತಿವೆ. ಹಣಬಲ, ತೋಳ್ಬಲದ ರಾಜಕೀಯ ಸನ್ನಿವೇಶದಲ್ಲಿ ಪ್ರಬಲ ಜಾತಿ, ವರ್ಗದ ಪುರುಷರು ಮಾತ್ರ ಆಯ್ಕೆಯಾಗಲು ಸಾಧ್ಯವಾಗುತ್ತಿದೆಯೇ ಹೊರತು ಸಾಮಾನ್ಯವರ್ಗದ ಪುರುಷರು ಸಹ ರಾಜಕೀಯ ಪ್ರವೇಶ ಮಾಡುವುದು ಎಷ್ಟು ದುಸ್ತರವಾದುದೆಂಬುದಕ್ಕೆ ಸಾಕ್ಷಿಯಾಗಿ ಚುನಾವಣೆಗೆ ನಿಂತು ಠೇವಣಿ ಕಳೆದುಕೊಂಡವರು ನಮ್ಮ ಮುಂದಿದ್ದಾರೆ.

ಮೀಸಲಾತಿಯ ಮಸೂದೆಯಲ್ಲಿರುವಂತೆ ಮಹಿಳಾ ಮೀಸಲಾತಿ ಸರತಿ ಪ್ರಕಾರ ಕ್ಷೇತ್ರ ಬದಲಾವಣೆಯಾಗುತ್ತದೆ. ಐದುವರ್ಷಕ್ಕೊಮ್ಮೆ ಹೀಗೆ ಬದಲಾವಣೆಗೊಂಡು, ಬೇರೆ ಬೇರೆ ಕ್ಷೇತ್ರದ ಮಹಿಳೆಯರಿಗೆ ಅವಕಾಶ ಮಾಡಿಕೊಡುತ್ತದೆ. ಮಸೂದೆಯ ಈ ಪದ್ಧತಿಯೇ ಹೆಚ್ಚು ವಿವಾದಕ್ಕೆ ಒಳಗಾದ ಅಂಶ. ಆ ಕ್ಷೇತ್ರದ ಪುರುಷ ರಾಜಕಾರಣಿಗಳು ಸಹಜವಾಗಿ ಸ್ಪರ್ಧಿಸುವ ಅವಕಾಶದಿಂದ ವಂಚಿತರಾಗುತ್ತಾರೆ. ಇಂತಹ ಸಂದರ್ಭದಲ್ಲಿ ತಮ್ಮ ಕುಟುಂಬದ ಮಹಿಳೆಯರನ್ನೇ ಮುಂಚೂಣಿಗೆ ತರುತ್ತಾರೆ. ಇದು ಸಾಮಾನ್ಯ ಕ್ಷೇತ್ರವಾದಾಗ ಮಹಿಳೆಯರನ್ನು ಹಿಂತಿರುಗಿ ಮನೆಗೆ ಕಳಿಸಿ, ತಾವೇ ಅಧಿಕಾರದ ಚುಕ್ಕಾಣಿಯನ್ನು ಹಿಡಿಯುತ್ತಾರೆ. ಕೆಲವೊಮ್ಮೆ ಇಂತಹ ಮೀಸಲಾತಿಯನ್ನು ನಿರ್ಧರಿಸುವಾಗ ಆಡಳಿತದಲ್ಲಿರುವ ಪಕ್ಷ ತನ್ನ ಅಧಿಕಾರವನ್ನು ಚಲಾಯಿಸಿ ವಿರೋಧಿ ಬಣವನ್ನು ಮುಗಿಸುವ ಕುತಂತ್ರವನ್ನು ಸಹ ಮಾಡಬಹುದು. ಹಾಗಾಗಿ ಸಣ್ಣ ಸಣ್ಣ ರಾಜಕೀಯ ಪಕ್ಷಗಳು, ಪ್ರಾದೇಶಿಕ ಪಕ್ಷಗಳು ಹಾಗೂ ಬೆಳೆಯುತ್ತಿರುವ ರಾಜಕೀಯ ನಾಯಕರ ಬೆಳವಣಿಗೆಗೆ ಹೊಡೆತ ಬೀಳುವುದು ಸಹಜ. ಮಹಿಳಾ ಮೀಸಲಾತಿಯ ಮೂಲಕ ತಮ್ಮಂತಹ ರಾಜಕೀಯ ನಾಯಕರುಗಳನ್ನು ಮುಗಿಸುವ ಹುನ್ನಾರ ಮಾಡಲಾಗುತ್ತಿದೆಯೆಂಬ ಆರೋಪ ಅವರದ್ದು. ಯಾದವ್ ತ್ರಿಮೂರ್ತಿಗಳು ಈ ಒಳ ಆಲೋಚನೆಯಿಂದಲೇ ಒಳ ಮೀಸಲಾತಿಯ ನೆಪಮಾಡಿ ಮಹಿಳಾ ಮೀಸಲಾತಿಯನ್ನೇ ವಿರೋಧಿಸುತ್ತಿರುವುದು.

ಮಹಿಳಾ ಮೀಸಲಾತಿಯ ಬಗ್ಗೆಯೂ ವಿಭಿನ್ನ ಅಭಿಪ್ರಾಯಗಳು ವ್ಯಕ್ತವಾಗುತ್ತಿವೆ. "ಮೀಸಲಾತಿಯು ಮೊದಲು ಜಾರಿಗೆ ಬರಲಿ, ಅನಂತರ ಹಿಂದುಳಿದ, ದಲಿತ, ಅಲ್ಪಸಂಖ್ಯಾತ ಮಹಿಳೆಯರ ಮೀಸಲಾತಿಯನ್ನು ಚರ್ಚಿಸಬಹುದು." ಎಂಬುದು ಮೀಸಲಾತಿಯನ್ನು ಬೆಂಬಲಿಸುತ್ತಿರುವ ಬಹುತೇಕರ ಅಭಿಪ್ರಾಯ. ರಾಜಕೀಯ ಪಕ್ಷಗಳು ಟಿಕೆಟ್ ನೀಡುವಂತಹ ಹಂತದಲ್ಲಿ ಶೇ. 33ರಷ್ಟು ಮಹಿಳೆಯರಿಗೆ ಟಿಕೆಟ್ ನೀಡಬೇಕೆಂಬ ಅಭಿಪ್ರಾಯವು ಸಹ ಚಾಲ್ತಿಯಲ್ಲಿದೆ. ಪರಿಶಿಷ್ಟ ಜಾತಿಗಳಿಗೆ ಈಗಾಗಲೇ ಮೀಸಲಾತಿಯ ಅವಕಾಶವಿರುವುದರಿಂದ ಆ ಕೋಟಾದಡಿಯಲ್ಲಿ ಮಹಿಳೆಯರಿಗೆ ಅವಕಾಶವನ್ನು ಕಲ್ಪಿಸಿಕೊಡಲಿ ಎಂಬ ಧೋರಣೆಯು ಸಹ ಇದೆ. ಯಾವ ಹಂತದಲ್ಲೂ ಪುರುಷರು ಮಹಿಳೆಯರೊಂದಿಗೆ ಅಧಿಕಾರ ಹಂಚಿಕೊಳ್ಳಲು ತಯಾರಿಲ್ಲವೆನ್ನುವುದು ತೀರಾ ಸ್ಪಷ್ಟವಾಗಿದೆ.

ಮಹಿಳೆಯರು ಕೇವಲ ಮೀಸಲಾತಿಯ ಸೌಲಭ್ಯದಿಂದ ಆಯ್ಕೆಗೊಂಡು ಬರುವುದರಿಂದ, ಸಂಪೂರ್ಣ ಬದಲಾವಣೆಯಾಗುತ್ತದೆಯೆಂಬ ಆಶಾಭಾವನೆಯು ಸಲ್ಲದು. ಹೀಗೆ ಆಯ್ಕೆಗೊಂಡ ಮಹಿಳೆಯರು ಗುಣಾತ್ಮಕ ಬದಲಾವಣೆಗಾಗಿ ಎಂತಹ ಪ್ರಯತ್ನ ಮಾಡುತ್ತಾರೆ ಎಂಬುದು ಮುಖ್ಯವಾದ ಪ್ರಶ್ನೆ. ಪುರುಷ ರಾಜಕಾರಣಕ್ಕಿಂತ ಭಿನ್ನರಾಜಕಾರಣವನ್ನು ಮಹಿಳೆಯರು ಮಾಡುತ್ತಾರೆಂದಾದರೆ, ಪ್ರಸ್ತುತ ರಾಜಕೀಯ ವಾತಾವರಣವನ್ನು ಸ್ವಲ್ಪಮಟ್ಟಿಗಾದರೂ ಸುಧಾರಿಸಬಹುದು.

* * *

ಈ ಸಾಲಿನ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯು ಗುಲಬರ್ಗಾದ ಹಸನಬಿ ಎಂ. ಬೀಳಗಿ ಅವರಿಗೆ ಇವರ ಸಾಹಿತ್ಯ ಸೇವೆಯನ್ನು ಗುರುತಿಸಿ ಗೌರವ ಪ್ರಶಸ್ತಿಯನ್ನು ನೀಡುತ್ತಿದೆ. ಅವರಿಗೂ, ಇನ್ನಿತರ ಅಕಾಡೆಮಿಗಳ ಪ್ರಶಸ್ತಿ ಪುರಸ್ಕೃತ ಎಲ್ಲ ಕಲಾವಿದೆಯರಿಗೂ ನಮ್ಮ ಮಾನಸದ ಅಭಿನಂದನೆಗಳು.

* * *

ವಾರ್ತಾ ಇಲಾಖೆಯಲ್ಲಿದ್ದು, ಸ್ವಯಂ ನಿವೃತ್ತಿ ಪಡೆದು ಅಂಕಣಕಾರ್ತಿ, ಅನುವಾದಕಿ, ಬರಹಗಾರ್ತಿಯಾಗಿ ಆಸ್ಥೆಯಿಂದ ಕನ್ನಡದ ಕೆಲಸ ಮಾಡಿದವರು ಬಿ.ಎಸ್. ವೆಂಕಟಲಕ್ಷ್ಮಿ. ಈಚೆಗೆ ಅವರು ಹೊರತರುತ್ತಿದ್ದ 'ಚರ್ಚೆಗೊಂದು ಚಾವಡಿ' ಎಲ್ಲರ ಅಚ್ಚುಮೆಚ್ಚಿನ ಪತ್ರಿಕೆಯಾಗಿತ್ತು. ಪ್ರತಿಭಾವಂತೆ ವೆಂಕಟಲಕ್ಷ್ಮಿ ಅವರು ಹೃದಯಾಘಾತದಿಂದ (ತಾ. 26-6-2009) ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ. ಅವರ ಆತ್ಮಶಾಂತಿಗಾಗಿ ಮಾನಸ ಬಳಗ ಪ್ರಾರ್ಥಿಸುತ್ತದೆ.

* * *

ನಮ್ಮ ನಡುವಿನ ಬಹುಮುಖಿ ಪ್ರತಿಭೆ ನೇಮಿಚಂದ್ರ, ವಿಜ್ಞಾನಿ, ಇಂಜಿನಿಯರ್, ಬರಹಗಾರ್ತಿ, ಸಂಶೋಧಕಿ, ಕಲಾವಿದೆ ಎಲ್ಲವೂ ಆಗಿರುವ ನೇಮಿಚಂದ್ರರ ಬರಹಗಳೂ ಸೃಜನಾತ್ಮಕ-ಸೃಜನೇತರ, ವೈಜ್ಞಾನಿಕ ಹೀಗೆ ಹಲವು ಬಗೆಯವು. ಅವರ 'ಯಾದ್ ವಶೇಮ್' ಕಾದಂಬರಿಗೆ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ಲಭಿಸಿದ್ದು ಸಂತೋಷ ತಂದಿದೆ. ಅವರಿಗೆ ನಮ್ಮ ಅಭಿನಂದನೆಗಳು. ❑

ಒಳಗಿನ ಪುಟಗಳಲ್ಲಿ....



# ಜೀವನ ಪ್ರೀತಿಯ ಮುಖಗಳು

■ *ಡಾ॥ ಎಲ್.ಸಿ. ಸುಮಿತ್ರಾ*
ತೀರ್ಥಹಳ್ಳಿ.

**ಕ**ಮಲಾದಾಸ್ ಅವರ ಕಥೆ ಕವಿತೆಗಳು ಗಂಡು ಹೆಣ್ಣಿನ ಸುತ್ತಲೇ ಯಾಕೆ ಸುತ್ತುತ್ತವೆ, ಅವರು ಬರೆಯಲು ಆರಿಸಿ ಕೊಂಡ ವಸ್ತುವಿಗೂ ಬರವಣಿಗೆಯ ರೀತಿಗೂ ಕಮಲಾ ದಾಸ್ ಬೆಳೆದ ಪರಿಸರಕ್ಕೂ ಇರುವ ಸಂಬಂಧ ಯಾವ ಬಗೆಯದು ಎಂಬ ಪ್ರಶ್ನೆಗಳು ಹಲವು ಸಲ ನನ್ನನ್ನು ಕಾಡಿವೆ. ಅವರ ಬರಹಗಳ ಕುರಿತು ಇಷ್ಟಾನಿಷ್ಟಗಳೇನೇ ಇದ್ದರೂ ಸ್ತ್ರೀಲೈಂಗಿಕತೆಯ ಕುರಿತ ಮೌನವನ್ನು ಮುರಿದ ಮೊದಲ ಲೇಖಕಿಯರಲ್ಲಿ ಅವರು ಪ್ರಮುಖರು. ನನಗೆ ಇದಕ್ಕಿಂತ ಮುಖ್ಯವಾಗಿ ಕಮಲಾ ಅವರ ಕಥೆಗಳು, ಆತ್ಮಚರಿತ್ರೆಯ ಮೂರುಭಾಗಗಳಲ್ಲಿ ಬರುವ ಕೇರಳದ ಸಾಂಪ್ರದಾಯಿಕ ಜೀವನಕ್ರಮ, ಕಮಲ ಸೂಕ್ಷ್ಮವಾಗಿ ಅದನ್ನು ಅಭಿವ್ಯಕ್ತಿಸುವ ರೀತಿ ಬಹಳ ಮುಖ್ಯವೆನಿಸಿತ್ತು. ಅವರ ಬಾಲ್ಯದ ನೆನಪುಗಳನ್ನು ಬಿಟ್ಟರೆ, ಅವರ ಬರವಣಿಗೆಯ ಪುಟಗಳಲ್ಲಿ ನೋವು ಮತ್ತು ವಿಷಾದ ತೊಟ್ಟಿಕ್ಕುತ್ತದೆ. ಅವರ 'ಮೈ ಸ್ಟೋರಿ' ಎಂಬ ಆತ್ಮಕಥೆಯಲ್ಲೂ ಗಾಯಗೊಂಡ ಹಕ್ಕಿಯರೆಕ್ಕೆಯ ಫಡಫಡಿಸುವ ಸದ್ದೇ ಕೇಳುತ್ತದೆ. ಈ ಲೇಖನದ ಮೊದಲ ಭಾಗದಲ್ಲಿ ಕಮಲಾದಾಸ್ ಕುರಿತೂ ಎರಡನೇ ಭಾಗದಲ್ಲಿ ಅವರ ಸಾಹಿತ್ಯ ಕುರಿತೂ ಬರೆದಿದ್ದೇನೆ. ಕಮಲಾದಾಸ್ ಬರವಣಿಗೆಯನ್ನು ಪ್ರತಿಭಟನೆಯ ಅಸ್ತ್ರ ವಾಗಿಯೂ ಬಳಸಿದರು. ಕೇರಳದಲ್ಲಿ ಮಾತೃಪ್ರಧಾನ ಕುಟುಂಬವ್ಯವಸ್ಥೆ ಕಮಲಾದಾಸ್ ಅವರ ವಿವಾಹದ ಸಮಯದಲ್ಲೇ ನಿಧಾನವಾಗಿ ಬದಲಾಗುತ್ತಿತ್ತು. ಅವರ "ಬಾಲ್ಯಕಾಲದ ನೆನಪುಗಳಲ್ಲಿ" ಸ್ತ್ರೀಯರ ವ್ಯಕ್ತಿತ್ವದ ಕುರಿತು ಆಗಿನ ಸಂದರ್ಭದ ಸಾಂಪ್ರದಾಯಿಕ ಸಮಾಜದ ನಿರೀಕ್ಷೆ ಗಳನ್ನು ವಿವರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅವರ ಕೃತಿಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಿತವಾಗಿರುವ ಅವರು ಹುಟ್ಟಿ ಬೆಳೆದ

ನಾಲಪ್ಪಾಟ್ ಮನೆಯನ್ನು, ಕಮಲಾದಾಸ್ ಅವರ ಕೃತಿಗಳಲ್ಲಿ ಚಿತ್ರಿತವಾಗಿರುವ ಪುನ್ನಯೂರ್ಕುಳವೆಂಬ ಊರನ್ನು ನೋಡುವ ಆಸೆಯಿತ್ತು. 2006ನೇ ಡಿಸೆಂಬರ್‌ನ ಕ್ರಿಸ್ಮಸ್ ದಿನ ನಾವು ಕೊಚ್ಚಿನ್ ನ ಅವರ ಮನೆಯಲ್ಲಿ ಕಮಲಾದಾಸ್ ಅವರನ್ನು ಭೇಟಿಯಾದೆವು.

ಮಲೆಯಾಳಮ್ ನಲ್ಲಿ ಮಾಧವಿಕುಟ್ಟಿ, ಇಂಗ್ಲಿಷ್‌ನಲ್ಲಿ ಕಮಲಾದಾಸ್ ಎಂಬ ಹೆಸರುಗಳಿಂದ ಕತೆ, ಕವಿತೆ ರಚಿಸಿ ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿರುವ ಲೇಖಕಿಯನ್ನು ನೋಡಬೇಕೆಂಬ ಕುತೂಹಲದಿಂದ ಫೋನ್ ಮೂಲಕ ಭೇಟಿಯನ್ನು ನಿಗದಿಪಡಿಸಿಕೊಂಡು ನಾನು ಮತ್ತು ಗೆಳತಿ ಪಾರ್ವತಿ ಕೊಚಿನ್ ಗೆ ಹೋದಾಗ ಕಮಲಾದಾಸ್ ಪೂನಾದಲ್ಲಿರುವ ತಮ್ಮ ಕಿರಿಯ ಮಗನ ಹತ್ತಿರದಲ್ಲಿ ವಾಸಿಸುವ ನಿರ್ಧಾರ ಮಾಡಿದ್ದರು. ಕೊಚಿನ್ ನ 'ಕಡವಂತರ'ದಲ್ಲಿ "ರಾಯಲ್ ಮ್ಯಾನ್‌ಶನ್" ಅಪಾರ್ಟ್ಮೆಂಟ್‌ನಲ್ಲಿ ಇಬ್ಬರು ಸೇವಕಿಯರ ಜತೆ ವಾಸಿಸುತ್ತಿದ್ದ ಅವರು ಕೇರಳ ಬಿಟ್ಟು ಪೂನಾಕ್ಕೆ ಹೋದುದನ್ನು ಪತ್ರಿಕೆಗಳು ದೊಡ್ಡ ಸುದ್ದಿ ಮಾಡಿದವು. ನಾವು ಅವರನ್ನು ನೋಡಿದಾಗ ಅವರು ಕೈ ಮೂಳೆ ಮುರಿದಿದ್ದರಿಂದ ಎರಡು ತಿಂಗಳಿಂದ ಹಾಸಿಗೆಯಲ್ಲೇ ವಿಶ್ರಾಂತಿಯಲ್ಲಿದ್ದೇನೆಂದು ಹೇಳಿದರು. ಮಲಗಿದಲ್ಲೇ ಒಂದು ಗಂಟೆ ನಿಧಾನವಾಗಿ ಮಾತನಾಡಿದರು. ``you have come at the right time. next month I may not be here" ಎಂದರು. ಹಾಸಿಗೆಯ ಮೇಲೆ ಅಸಹಾಯಕತೆಯಿಂದ ಮಲಗಿದ್ದ ಕಮಲಾ ಅವರನ್ನು ನೋಡಿದಾಗ ರೆಕ್ಕೆ ಮುರಿದ ಹಕ್ಕಿಯಂತೆನಿಸಿತು. ಮನೆಯ ಹೊರಬಾಗಿಲಲ್ಲಿ ಕಮಲಾದಾಸ್ ಎಂಬ ಬೋರ್ಡ್ ಇದ್ದರೆ, ಬೆಡ್‌ರೂಮ್ ಬಾಗಿಲಲ್ಲಿ ಕಮಲಾಸುರೈಯ್ಯಾ ಎಂಬ ಫಲಕವಿತ್ತು. ಹೌದು ನಾನು ಹಲವು ಹೆಸರುಗಳನ್ನು ಬಳಸುತ್ತೇನೆ ಮನೆಯಲ್ಲಿ ಅಮಿ, ಕಮಲಾ. ಹೊರಗೆ ಮಾಧವಿಕುಟ್ಟಿ, ಕಮಲಾದಾಸ್, ಕಮಲಾಸುರೈಯ್ಯ ಹೀಗೆ" [ಈಗ ಪೂನಾದಿಂದ ಅವರು ಇನ್ನು ಮುಂದೆ ಕಮಲಾದಾಸ್ ಎಂಬ ಹೆಸರು ಮಾತ್ರ ಬಳಸುವುದಾಗಿ ಹೇಳಿದ್ದಾರೆ] "ಹೌದು ಕಲ್ಪನೆಗಳು ವಾಸ್ತವಿಕ ಅನುಭವಗಳು ಸೇರಿ ನನ್ನ ಕತೆ ಕವಿತೆಗಳು ಜನಿಸಿವೆ"ಎಂದು ಹೇಳುತ್ತಾ ಮೊಮ್ಮಗಳು ನಯನತಾರೆಯನ್ನು ನೆನೆಸಿಕೊಂಡರು. ಮೊಮ್ಮಕ್ಕಳು ಪ್ರೀತಿಯಿಂದ ಅಪ್ಪಿಕೊಡಾಗ ಈ ನೋವು ಸ್ವಲ್ಪ ಮರೆಯುತ್ತದೆ. ಕೊಚಿನ್‌ನಲ್ಲೇ ಇರುವ ತಂಗಿ ಆಗಾಗ ಬಂದು ಭೇಟಿಯಾಗುತ್ತಾಳೆ, ಡಾಕ್ಟರ್ ಆಗಿರುವ ಇನ್ನೊಬ್ಬ ಸಹೋದರ ತಮ್ಮಂತೆಯೇ ಮೂಳೆ ಮುರಿದುಕೊಂಡು ಮಲಗಿರುವುದಾಗಿ ಹೇಳುತ್ತಾ "docters also fall" ಅಂದರು.

ತಮ್ಮ ಹಿರಿಯ ಮಗ ಎಂ.ಡಿ. ನಾಲಪತ್ ದೆಹಲಿಯಲ್ಲಿದ್ದು ಅವನು ತಿರುವನಂತಪುರದ ರಾಜಮನೆತನದ ಹುಡುಗಿಯನ್ನು ಮದುವೆಯಾಗಿದ್ದಾನೆ, ಕಿರಿಯಮಗ ಜಯಸೂರ್ಯ ಪೂನಾದಲ್ಲಿ, ಎರಡನೆಯ ಮಗ ಬೆಂಗಳೂರಿನಲ್ಲಿ ಇರುವುದಾಗಿ ಹೇಳಿದರು. ತಮ್ಮ ಸೊಂಪಾದ ತಲೆಗೂದಲ ಬಗ್ಗೆ ಅಭಿಮಾನವಿದ್ದ ಕಮಲಾದಾಸ್‌ಗೆ ದೆಹಲಿಆಸ್ಪತ್ರೆಯಲ್ಲಿ ಸ್ಕ್ಯಾನಿಂಗ್ ವೇಳೆ ತಲೆಗೂದಲು ಕತ್ತರಿಸಿದ ಕುರಿತು ಬೇಸರ. ನಾವು ಪುನ್ನಯೂರ್‌ಕುಳಕ್ಕೆ ಹೋಗುತ್ತೇವೆಂದಾಗ "ಅಲ್ಲಿ ನಾಗಬನ ಮತ್ತು ನೀರ್ಮಾದಳಮರ ಬಿಟ್ಟು ಇನ್ನೇನೂ ಉಳಿದಿಲ್ಲ" ಎಂದು ನಿಟ್ಟುಸಿರಿಟ್ಟರು. ತನ್ನ ಪಾಲಿಗೆ ಬಂದಿದ್ದ ನಾಲಪ್ಪಾಟ್ ಮನೆಯನ್ನೂ ನೋಡಿಕೊಳ್ಳಲಾಗುವುದಿಲ್ಲ ಎಂದು ತಾವು ಮಾರಿದಂತೆ ತಂಗಿ ಸಹಾ ತಂದೆ ಕಟ್ಟಿಸಿದ್ದ ಸರ್ವೋದಯ ಹೆಸರಿನ ಮನೆಯನ್ನು ಮಾರಿದಳು.ಕೊಂಡವರು ಆ ಮನೆಗಳನ್ನು ಕೆಡವಿದ್ದರಿಂದ ಈಗಲ್ಲಿ ಏನೂ ಇಲ್ಲ ಎಂದಾಗ ಅವರ ದನಿಯಲ್ಲಿ ವಿಷಾದವಿತ್ತು.

ಮನೆಯ ಮೆಟ್ಟಿಲಿಳಿದು ಬರುವಾಗ '1 ಬಿ. ಕಮಲಾದಾಸ್' ಎಂದು ಬರೆದಿದ್ದ ನೇಮ್‌ಪ್ಲೇಟ್ ಕಾಣಿಸಿತು. ಈ ನೇಮ್ ಪ್ಲೇಟ್ ಇನ್ನು ಕೆಲವೇದಿನಗಳ ನಂತರ ಇಲ್ಲಿರುವುದಿಲ್ಲ ಎಂದು ಹೊಳೆದಾಗ ವಿಷಾದವೆನಿಸಿತು.

* * * * *

"ಬಾಲ್ಯಕಾಲದ ಸ್ಮೃತಿಗಳು"ಮತ್ತು "ಮೈಸ್ಟೋರಿ" ಎಂಬ ಆತ್ಮಕಥೆಗಳಲ್ಲೂ ಅವರಕತೆ, ಕವಿತೆಗಳಲ್ಲೂ ಮತ್ತೆಮತ್ತೆ ಪ್ರಸ್ತಾಪಿತವಾಗಿರುವ ನಾಲಪ್ಪಾಟ್ ಮನೆ ಕಮಲಾದಾಸ್ ಅವರು ಹುಟ್ಟಿ ಬೆಳೆದ ಅವರ ತಾಯಿಯ ಮನೆ. ಕುವೆಂಪುಗೆ ಕುಪ್ಪಳಿ ಸ್ಫೂರ್ತಿಯಾದಂತೆ ಕಮಲಾಗೆ ಪುನ್ನಯೂರುಕುಳದ ನಾಲಪ್ಪಾಟ್ ಮನೆ. ಗುರುವಾಯೂರು ದೇವಾಲಯದಿಂದ ಹತ್ತು ಕಿ.ಮೀ. ದೂರದ ಪುನ್ನಯೂರ್‌ಕುಳ ಕಮಲಾ ಅವರ ತವರುಮನೆ, ಗಂಡನ ಮನೆ ಎರಡೂ ಇದ್ದ ಊರು. ಪ್ರತಿಷ್ಠಿತ ನಾಯರ್ ಕುಟುಂಬದಲ್ಲಿ ಜನಿಸಿದ ಕಮಲಾ ಅವರ ತಾಯಿ ಮಲೆಯಾಳಂ ನ ಮುಖ್ಯಕವಿಗಳಲ್ಲೊಬ್ಬರಾದ ಬಾಲಾಮಣಿಯಮ್ಮ. ಚಿಕ್ಕತಾತ ಪ್ರಸಿದ್ಧ ಲೇಖಕ ನಾಲಪಾಟ್‌ನಾರಾಯಣ ಮೆನೋನ್. ಇದೇ ಊರಿನಲ್ಲಿ ಹುಟ್ಟಿ ಬೆಳೆದವರು. ಕಮಲಾ ತಂದೆ ವಿ.ಎಂ. ನಾಯರ್ "ಮಾತೃಭೂಮಿ" ಪತ್ರಿಕೆಯ ಸಂಪಾದಕರಾಗಿಯು ಕೆಲಸ ಮಾಡಿದ್ದರು.

ವಿಶಾಲವಾದ ತೆಂಗಿನ ತೋಟದ ನಡುವೆ ಅಲ್ಲೊಂದು ಇಲ್ಲೊಂದು ಮನೆಗಳು. ಅಂಕುಡೊಂಕಾಗಿ ಹರಿದ ಕಿರಿದಾದ ಟಾರ್‌ರಸ್ತೆ. ಎದುರಿನಿಂದ ಆಟೋರಿಕ್ಷ ಬಂದರೂ ನಮ್ಮ ಕಾರು ನಿಂತು ಜಾಗ ಕೊಡಬೇಕಾಗಿತ್ತು. ಪುನ್ನಯೂರ್ಕುಳದಿಂದ ಎಡಕ್ಕೆ ತಿರುಗಿ ಕೇರಳದ ಟಿಪಿಕಲ್ ಪರಿಸರದಲ್ಲಿ ಒಂದು ಕಿ.ಮೀ ಚಲಿಸಿ, ನಾಲಪಾಟ್ ತರವಾಡು ಮನೆಯಿದ್ದ ಜಾಗಕ್ಕೆ ಬಂದೆವು.ಅಲ್ಲಿ ತೆಂಗಿನಕಾಯಿ ಕೀಳುತ್ತಿದ್ದ ಕೆಲಸಗಾರರು ತೋಟದ ನಡುವೆ ಖಾಲಿಯಿದ್ದ ವಿಶಾಲಸ್ಥಳವನ್ನು 'ವೀಡು' ಇದ್ದ ಸ್ಥಳ ಎಂದು ತೋರಿಸಿದರು. ಸ್ವಲ್ಪ ದೂರದಲ್ಲಿ ಗಾರೆಯ ಕಟ್ಟೆಯಿದ್ದ ಬಾವಿಯಿತ್ತು. ಹಿಂಭಾಗದಲ್ಲಿದ್ದ ನಾಗಬನದಲ್ಲಿ ಗುಂಪಾಗಿ ಬೆಳೆದ ಮರಗಳ ನಡುವೆ ರಂಜೆಯ ಮರವೂ ಇತ್ತು. ಅದರ ಬುಡದಲ್ಲಿ ಸಿಮೆಂಟ್ ಕಟ್ಟೆಯ ಮೇಲೆ ಎರಡು ಕಲ್ಲಿನಪ್ರತಿಮೆಗಳು. ಶಿವಲಿಂಗ, ಎದುರಿಗೆ ಕಂಚಿನ ಕಾಲುದೀಪ. ಕಮಲಾದಾಸ್ ಕೃತಿಗಳಲ್ಲಿ ಬರುವ ನೀರ್ಮಾದಳಮರ ಚಳಿಗಾಲವಾದುದರಿಂದ ಎಲೆಉದುರಿಸಿ ಬೋಳಾಗಿ ನಿಂತಿತ್ತು. (ನಾವು ಕ್ರಿಸ್ಮಸ್ ಮರುದಿನ ಅಲ್ಲಿದ್ದೆವು.) ಬೇಸಿಗೆಯಲ್ಲಿ ಮರದತುಂಬ ಕೆನೆಬಣ್ಣದ ಪರಿಮಳಭರಿತ ಹೂವರಳಿಸುವ ಈ ನೀರ್ಮಾದಳ ಕಮಲಾ ಅವರ ಕೃತಿಗಳಲ್ಲಿ ರೂಪಕವಾಗಿ ಬಳಕೆಯಾಗಿದೆ. ಬೇಸಿಗೆಯಲ್ಲಿ ಹೂ ಅರಳಿದಾಗ ಮನೆಯತುಂಬಾ ಪರಿಮಳ ತುಂಬಿರುತ್ತಿತ್ತು ಎಂದು ಬರೆಯುತ್ತಾರೆ. 'ನೀರ್ ಮಾದಳ ಹೂಬಿಟ್ಟ ಕಾಲ' ಎಂಬ ಹೆಸರು ಹೀಗೆ ರೂಪಕವಾಗಿದೆ. ಕೊನೆಗೂ ನೀರ್ಮಾದಳದ ಬಳಿ ನಿಂತು ಸುತ್ತಲಿನ ಪರಿಸರವನ್ನು ನೋಡುತ್ತಿದ್ದಾಗ ಕಮಲಾದಾಸ್ ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದ ಪ್ರಸಿದ್ಧ ನಾಲಪಾಟ್ ಮನೆಯ ಕುರುಹು ಇದಿಷ್ಟನ್ನು ಬಿಟ್ಟು ಇನ್ನೇನೂ ಇರಲಿಲ್ಲ. ಬೇಸರವೆನಿಸಿತು. ನಾಗಬನದ ಬಳಿ ನಿಂತು ಆ ಪ್ರತಿಭಾವಂತ ಲೇಖಕಿ ಚಿತ್ರಿಸಿದ ಜೀವನವನ್ನು ಕಲ್ಪಿಸಿಕೊಂಡೆ.

ಕಮಲಾ ದಾಸ್ ತಮ್ಮ "ಬಾಲ್ಯದ ನೆನಪುಗಳು" ಕೃತಿಯಲ್ಲಿ ಈ ಮನೆಯನ್ನು ಕುರಿತು ವಿವರವಾಗಿ ಬರೆದಿದ್ದಾರೆ. "ಒಳಗಡೆ ಅಂಗಳವಿದ್ದು ದಕ್ಷಿಣ ದಿಕ್ಕಿಗೆ ತೆರೆಯುತ್ತಿದ್ದ ಚಾವಡಿಯಲ್ಲಿ ಚಿಕ್ಕ ದೇವಾಲಯವಿತ್ತು. .ಮುಖಮಂಟಪದ ಕಡಿದಾದ ಮೆಟ್ಟಿಲುಗಳನ್ನು ಹತ್ತಿ ಬಂದರೆ ಚಿಕ್ಕ ತಾತನ ಭವ್ಯವಾಗಿ ಸಜ್ಜುಗೊಂಡಿದ್ದ ಕೊಠಡಿ. ವರ್ಷದಲ್ಲಿ ಎರಡು ಸಲ ಒಟ್ಟಂತುಳ್ಳಲ್ ನಡೆಯುತ್ತಿದ್ದ ಎರಡು ಹಂತಗಳಲ್ಲಿದ್ದ ಪೋರ್ಟಿಕೋ.

ಮಹಡಿಯ ಮೇಲೂ ಕೆಳಗೂ ತಲಾ ಮೂರು ಕೊಠಡಿಗಳಿದ್ದ, ಗಂಡಸರಿಗೂ ಹೆಂಗಸರಿಗೂ ಬೇರೆ ಬೇರೆ ಊಟದಮನೆಗಳಿದ್ದ ಸಾಕಷ್ಟು ದೊಡ್ಡ ಮನೆ. ಮೇಲೆ ಅಟ್ಟದಲ್ಲಿ ಪೇರಿಸಿಟ್ಟ ಪಾಲಕಿ ಮತ್ತಿತರ ಹಳೆಯ ಪೆಟ್ಟಿಗೆಗಳು. ಹಿಂಬಾಗದ ಕಿರುಜಗಲಿ ದಾಟಿದರೆ ಸ್ನಾನದ ಮನೆಯಿದ್ದ ಕೊಳ. ಕೊಳದ ಆಚೆಗೆ ಹಿರಿಯರ ಶ್ರಾದ್ಧ ಆಚರಿಸಲು ಇದ್ದ ಶ್ರಾದ್ಧಪುರ ವೆಂಬ ಕೊಠಡಿ. ಇನ್ನೆರಡು ಕೊಳಗಳು." ಆದರೆ ಇವೆಲ್ಲ ಈಗ ಕಮಲಾದಾಸ್ ಅವರ ಕೃತಿಗಳಲ್ಲಿ ಮಾತ್ರ ಉಳಿದಿವೆ. ಪ್ರೀತಿಯ ಅಜ್ಜಿಯಿದ್ದ ನಾಲಪಾಟ್ ಮನೆ ನೂರಾರು ವರ್ಷ ಹಳೆಯದಾದುದರಿಂದ ಸಮೀಪದಲ್ಲೇ ಕಟ್ಟಿಸಿದ ಹೊಸಮನೆಗೆ ವಾಸಿಸಲು ಎಲ್ಲರೂ ಹೋದಾಗ "ಸತ್ತವರ ಕಣ್ಣುಗಳನ್ನು ಮುಚ್ಚುವಂತೆ ಆ ಹಳೆಮನೆಯ ಕಿಟಕಿಗಳನ್ನು ಮುಚ್ಚಲಾಯಿತು" ಎಂದು ಕಮಲಾದಾಸ್ ಬರೆಯುತ್ತಾರೆ. ನೀರ್ಮಾದಳ ಮರ ಮತ್ತು ನಾಗಬನವಿದ್ದ ಸ್ಥಳವನ್ನು ಕಮಲಾ ಕೇರಳ ಸಾಹಿತ್ಯ ಅಕಾದೆಮಿಗೆ ನೀಡಿದ್ದಾರೆ. ನಾಲಪಾಟ್ ಮನೆಯಿಂದ ಫರ್ಲಾಂಗ್‌ನಷ್ಟು ದೂರದಲ್ಲಿ ಕಮಲಾದಾಸ್ ಪತಿ ಮಾಧವದಾಸ್ ಅವರ ಮನೆ 'ಅಂಬಲತ್ತಿಲ್' ಇದೆ. ಮನೆ ನೋಡಿಕೊಳ್ಳಲು ಪಕ್ಕದಲ್ಲಿರುವ ಜನ ಬಿಟ್ಟರೆ ಮನೆಯ ಸದಸ್ಯರಾರೂ ಅಲ್ಲಿ ಇಲ್ಲ. ಕೇರಳ ವಾಸ್ತುಶೈಲಿಯ



ದೊಡ್ಡ ಮನೆ, ಶಿಥಿಲಾವಸ್ಥೆಯಲ್ಲಿದೆ. ಆ ಕೋಮಲಮನದ ಕವಿ ನಡೆ ದಾಡಿದ ಸ್ಥಳ ಕೇಳುವವರಿಲ್ಲದೆ ಅನಾಥವಾಗಿತ್ತು. ಅಲ್ಲಿ ದಾರಿಯಲ್ಲಿ ಹೋಗುತ್ತಿದ್ದ ನರ್ಸ್ ಒಬ್ಬರು ಆ ಮನೆಯವರೆಗೂ ನಮ್ಮ ಜತೆ ಬಂದು ತೋರಿಸಿದರು.

**ಸಾಹಿತ್ಯ;** ಮಲೆಯಾಳಮ್‌ನಲ್ಲಿ 'ಮಾಧವಿಕುಟ್ಟಿ' ಎಂಬ ಹೆಸರಿನಲ್ಲಿ ಕಥಾಸಂಗ್ರಹಗಳು,ಕಾದಂಬರಿಗಳು, 'ಬಾಲ್ಯದನೆನಪುಗಳು' (ಬಾಲ್ಯಕಾಲ ಸ್ಮರಣಂಗಳ್), ನೀರ್ಮಾದಳ ಹೂಬಿಟ್ಟ ಸಮಯ (ನೀರ್ಮಾದಳಂ ಪೂತ್ತ ಕಾಲಮ್). ಕಮಲಾದಾಸ್ ಎಂಬ ಹೆಸರಿನಲ್ಲಿ ಇಂಗ್ಲಿಷ್‌ನಲ್ಲಿ ಕವನ ಸಂಗ್ರಹಗಳು, ಕಾದಂಬರಿಗಳು, ಮೈ ಸ್ಟೋರಿ ಎಂಬ ಆತ್ಮ ಚರಿತ್ರೆ ಬರೆದಿದ್ದಾರೆ. 'ಮೈಸ್ಟೋರಿ'ಯ ಮಲೆಯಾಳಮ್ ಅನುವಾದ 'ಎಂಡೆಕಥಾ' ಒಂಬತ್ತು ಆವೃತ್ತಿಗಳನ್ನು ಕಂಡಿದೆ. ಜಾಪನೀಸ್ ಭಾಷೆಯೂ ಸೇರಿದಂತೆ ಹದಿನೈದು ಭಾಷೆಗಳಿಗೆ ಅನುವಾದವಾಗಿದೆ. ಅಮೆರಿಕನ್ ವಿಶ್ವವಿದ್ಯಾನಿಲಯಗಳಲ್ಲಿ ಅವರ ಕವಿತೆಗಳು ಪಠ್ಯಗಳಾಗಿವೆ. ಜಪಾನೀ ವಿಶ್ವವಿದ್ಯಾಲಯವೊಂದರಲ್ಲಿ 'ಮೈ ಸ್ಟೋರಿ' ಪಠ್ಯವಾಗಿದೆ. ಕಮಲಾದಾಸ್ ಅವರ ಕೃತಿಗಳು ಪ್ರಪಂಚದ ಹಲವು ಭಾಷೆಗಳಿಗೆ ಅನುವಾದವಾಗಿವೆ. ತಮ್ಮ ಬರವಣಿಗೆಯಲ್ಲಿ ಸಾಂಪ್ರದಾಯಿಕ ಸಮಾಜದ ಕಟ್ಟುಪಾಡುಗಳನ್ನು ಮೀರಿದ್ದರಿಂದ ಕಮಲಾ ಹಲವು ವಿರೋಧಗಳನ್ನು ಎದುರಿಸ ಬೇಕಾಯಿತು. ಮಲೆಯಾಳಮ್‌ನ ಇಂದಿನ ಮುಖ್ಯ ಲೇಖಕರಲ್ಲೊಬ್ಬರಾದ ಬಾಲಚಂದ್ರನ್ ಚುಳ್ಳಿಕ್ಕಾಡ್ ಅವರ ಪ್ರಕಾರ ವೈಕ್ಕಮ್ ಮಹಮ್ಮದ್ ಬಷೀರರಂತೆ ಕಮಲಾ ಕೂಡ ಸ್ವಂತಿಕೆಯುಳ್ಳ ಲೇಖಕಿ. ಪಾಲ್ ಸಕ್ಕರಿಯ, ಎಮ್ ಪಿ ನಾರಾಯಣ ಪಿಳ್ಳೈ ಮುಂತಾದ ಲೇಖಕರು ಸಮಾಜದ ಸಾಂಪ್ರದಾಯಿಕ ಸ್ವೀಕೃತ ಮೌಲ್ಯಗಳನ್ನು ಮೀರಿ ಬರೆದಾಗ ಮೆಚ್ಚಿಕೊಂಡ ಕೇರಳದ ಓದುಗರು ಕಮಲಾ ಅವರ ವಿಚಾರದಲ್ಲಿ ಹಾಗೆ ಮುಕ್ತಮನಸ್ಸಿನವರಾಗಲಿಲ್ಲ. ಆದರೆ ಕಮಲಾ ಈ ಯಾವ ವಿರೋಧಗಳನ್ನೂ ಲೆಕ್ಕಿಸಲಿಲ್ಲ.

ಕಲ್ಕತ್ತಾದಲ್ಲಿ ಪ್ರೌಢಶಾಲೆಯಲ್ಲಿ ಓದುತ್ತಿದ್ದ 15 ರ ಕಮಲಾಗೆ ತನಗಿಂತ 15 ವರ್ಷ ಹಿರಿಯರಾದ ಮಾಧವದಾಸ್ ಜತೆಗಿನ ವಿವಾಹ ಆಘಾತ ವುಂಟುಮಾಡಿತು. ಸಾಹಿತ್ಯದಲ್ಲಿ ಆಸಕ್ತಿಯಿದ್ದ ಕಮಲಾ ಅವರಿಗೆ ಮದುವೆಯ ನಂತರ ಬಹಳ ಬೇಗ ಎರಡು ಮಕ್ಕಳ ಜವಾಬ್ದಾರಿ, ಕೌಟುಂಬಿಕ ಅಸಂತೋಷಗಳು ಈ ಎಲ್ಲ ಒತ್ತಡಗಳು ಬರವಣಿಗೆಯಲ್ಲಿ ಮುಕ್ತಿ ಕಂಡವು. ತಮ್ಮ ಪತಿಯ ವಿಕ್ಷಿಪ್ತಸ್ವಭಾವ ತಮಗುಂಟುಮಾಡಿದ ನೋವಿನಿಂದ ಹೊರಬರಲು ಯಾವ ದಾರಿಗಳೂ ಇರಲಿಲ್ಲವೆಂದು ಹೀಗೆ ಬರೆಯುತ್ತಾರೆ:

``...... I could not admit to all that my marriage had flopped.I could not return home to the nallapat house, a divorcee, for there had been goodwill between our two families for three genaretions which I did not want to ruin.'' [102, ಮೈ ಸ್ಟೋರಿ]

ಅನಿವಾರ್ಯವಾಗಿ ಬರವಣಿಗೆ ಅಭಿವ್ಯಕ್ತಿಯ ಸಾಧನವಾಯಿತು. ಭಾವುಕವಾದ ಮತ್ತು ಸೂಕ್ಷ್ಮ ಸಂವೇದನೆಯ ಅಭಿವ್ಯಕ್ತಿಯ ಕವಿತೆಗಳು ಮೊದಲು ಜನ್ಮ ತಳೆದವು. "My grief fell like drops of honey on the white sheets on my desk.my sorrows floated over the pages of magazines darkly as heavy monsoon clouds do in the sky..."[ಪು.105.ಮೈಸ್ಟೋರಿ.] ಅವರ ನೋವಿನ ತೀವ್ರತೆಯೇ ಅವರ ಬರವಣಿಗೆಯ ಹಿಂದಿನ ಶಕ್ತಿಯಾಗಿದೆ.

ತಾವು ಕನಸಿದ ಆದರ್ಶಪ್ರೀತಿ ತಮಗೆ ದಕ್ಕದೇ ಹೋದ ಸ್ಥಿತಿಯನ್ನು "ಮೈ ಗ್ರ್ಯಾಂಡ್ ಮದರ್ಸ್ ಹೌಸ್"ಕವಿತೆಯಲ್ಲಿ ಚಿತ್ರಿಸಿದ್ದಾರೆ. ಕಮಲಾದಾಸ್ ರ ಹೆಚ್ಚಿನ ಕವಿತೆಗಳ ವಸ್ತು ಪ್ರೀತಿ. ಒಂದು ಗೀಳು ಎನ್ನುವಷ್ಟರ ಮಟ್ಟಿಗೆ ಪ್ರೀತಿ ಅವರ ಬರಹವನ್ನು ಆವರಿಸಿದೆ. ಕಥೆ, ಕಾದಂಬರಿಗಳಲ್ಲೂ ಗಂಡು ಹೆಣ್ಣಿನ ಸಂಬಂಧಗಳಿಗೆ ಅವರು ಹೆಚ್ಚು ಗಮನ ಹರಿಸಿದ್ದಾರೆ. ತಮ್ಮ ಮುಕ್ತ ಬರವಣಿಗೆಯಿಂದಾಗಿ ಮನೆಯವರಿಗಾದ ಮುಜುಗರವನ್ನು ಕುರಿತು "she would have proved herself to be a mere embarassment to the member of her family, for she is like a goldfish in a well-lit bowl whose movements are never kept concealed."[ಪು.206.ಮೈ ಸ್ಟೋರಿ]

ಕೇರಳದಲ್ಲಿ ಹೀಗೆ ಮುಕ್ತವಾಗಿ ಬರೆಯುವ ಪರಿಸರ ಇಲ್ಲದುದರಿಂದ ತಾವು ಆತ್ಮಾಭಿವ್ಯಕ್ತಿಯ ಕವಿತೆಗಳನ್ನು ಇಂಗ್ಲಿಷ್‌ನಲ್ಲು, ಕತೆಗಳನ್ನು



ಮಲೆಯಾಳಂನಲ್ಲು ಬರೆದೆನೆಂದು ಹೇಳಿಕೊಂಡಿದ್ದಾರೆ. ಅವರ ಬರವಣಿಗೆಯಲ್ಲಿ ಸ್ತ್ರೀ ಪುರುಷ ತಾರತಮ್ಯ ಮಾಡುವ ಸಮಾಜವನ್ನು ಕೆಣಕಿ ಎಚ್ಚರಿಸುವ ಗುಣ ಕಾಣುತ್ತದೆ. ಸಂಪ್ರದಾಯದ ಮುಸುಕಿನಲ್ಲಿ ನೆಮ್ಮದಿಯಾಗಿರುವ ಸಮಾಜಕ್ಕೆ ಶಾಕ್ ನೀಡುವುದು ಅವರಿಗೆ ಇಷ್ಟ. ಆತ್ಮ ಕೇಂದ್ರಿತವಾದ ಕವಿತೆಗಳು, ಗಂಡು ಹೆಣ್ಣಿನ ಸಂಬಂಧದ ಸುತ್ತ ಸುತ್ತುವ ಕಥೆಗಳು ಸ್ತ್ರೀಯ ವ್ಯಕ್ತಿತ್ವದ ಒಳಗನ್ನು ಅನಾವರಣಗೊಳಿಸಿದವು. ತಮ್ಮ ತಂದೆತಾಯಿ ಮತ್ತು ಪತಿ ಇವರೆಲ್ಲರ ಕುರಿತು ಮುಚ್ಚುಮರೆಯಿಲ್ಲದೆ ಬರೆಯುವ ಕಮಲಾ ಕೆಲವೊಮ್ಮೆ ಪರಸ್ಪರ ತದ್ವಿರುದ್ಧವಾಗಿ ಬರೆಯುತ್ತಾರೆ. ತಮ್ಮ ಬದಲಾಗುವ ವಿಚಾರಗಳ ಕುರಿತು"ನಾನು ಮತ್ತು ನನ್ನ ನಂಬಿಕೆಗಳು ಬದಲಾಗುತ್ತಿರುತ್ತವೆ" ಎಂದು ಶ್ರೀದೇವಿ ನಾಯರ್‌ಗೆ ನೀಡಿದ ಸಂದರ್ಶನದಲ್ಲಿ ಹೇಳಿದ್ದಾರೆ. ಪದೇಪದೇ ತಮ್ಮ ಅಭಿಪ್ರಾಯಗಳನ್ನು ಬದಲಿಸುವ ಕಮಲಾದಾಸ್‌ರ ತಾತ್ತ್ವಿಕತೆಯ ಬಗ್ಗೆ ಪ್ರಶ್ನೆಗಳೇಳುತ್ತವೆ. ಅವರೊಳಗೊಬ್ಬ ಬಂಡಾಯಗಾರ್ತಿ ಇದ್ದಾಳೆಂದು ಅವರ ಮಾತು ಮತ್ತು ಬರಹಗಳು ತಿಳಿಸುತ್ತವೆ. ಕಮಲಾಗೆ ಚಿಕ್ಕ ವಯಸ್ಸಿನಲ್ಲಿ ಸಿಕ್ಕ ಸಾಹಿತ್ಯದ ವಾತಾವರಣ (ಶಾಲಾದಿನಗಳಲ್ಲಿ ಅಣ್ಣನ ಜತೆ ಸೇರಿ ಕೈಬರಹದ ಪತ್ರಿಕೆ ಹೊರಡಿಸುತ್ತಿದ್ದರು), ಅಜ್ಜಿಯ ಮಾರ್ಗದರ್ಶನ, ಪ್ರೀತಿ ಅಪರಿಮಿತ ಆತ್ಮವಿಶ್ವಾಸಕ್ಕೆ ಕಾರಣವಾದವು. ತಮ್ಮ ದೇಹಸೌಂದರ್ಯದ ಕುರಿತು ತುಂಬಾ ಕಾಳಜಿ ವಹಿಸುತ್ತಿದ್ದ ಕಮಲಾ ವಿವಾಹದ ಹೊಸತರಲ್ಲಿ ಪತಿ ತಮ್ಮನ್ನು ಅಲಕ್ಷಿಸಿದಾಗ, ಮತ್ತೆ ಮತ್ತೆ ಅವಮಾನ ಅನುಭವಿಸಿದಾಗ ಬರೆದ ಕವಿತೆ "ಮೈ ಗ್ರ್ಯಾಂಡ್ ಮದರ್ಸ್‌ಹೌಸ್" ನಲ್ಲಿ ಪ್ರೀತಿಗಾಗಿ ತಹತಹಿಸಿದ ಪರಿ ಮನ ಮಿಡಿಯುತ್ತದೆ. ಅವರ ಬರವಣಿಗೆಯ ಬಂಡಾಯದ ಹಿಂದಿನ ಪ್ರಚೋದನೆಯೇನು ಎಂದು ಈ ಕವಿತೆಯಲ್ಲಿ ಸೂಚನೆಯಿದೆ:

I lived in such a house and was proud , and
loved ….
I who have lost
My way
and beg now at strangers'doors to
Receive love, at least in small change?

ಬಾಲ್ಯದಲ್ಲಿ ಅಜ್ಜಿಯ ಸಾಂಗತ್ಯ, ಪ್ರೀತಿ ರಕ್ಷಣೆಗಳ ಭಾವನಾತ್ಮಕ ಭದ್ರತೆಯಲ್ಲಿ, ಆತ್ಮವಿಶ್ವಾಸದ ಹುಡುಗಿಯಾಗಿ ಬೆಳೆದ ಕಮಲಾ ಮದುವೆಯ ಅನಂತರ ತನ್ನ ಕನಸಿಗೆ ವಿರುದ್ಧವಾದ ವಾಸ್ತವವನ್ನು ನೋಡಿ ಭ್ರಮನಿರಸನಗೊಂಡಳು. ಜೀವನದಲ್ಲಿ ನಿಸ್ವಾರ್ಥಪ್ರೀತಿಗಾಗಿ ನಡೆಸಿದ ಹುಡುಕಾಟ ನಿರರ್ಥಕವೆನ್ನಿಸಿದ ಸ್ಥಿತಿಯನ್ನು ಹೇಳುವುದರ ಜತೆಗೆ ಕವಿತೆ, ಸಾಂಪ್ರದಾಯಿಕ ಭಾರತೀಯ ಕುಟುಂಬವ್ಯವಸ್ಥೆ ಸ್ತ್ರೀಯಿಂದ ತಾಯಿಯ, ಸಹೋದರಿಯ, ಪುತ್ರಿಯ ಪ್ರೀತಿಗೆ ವಾತ್ಸಲ್ಯಕ್ಕೆ ಕೊಡುವ ಮಹತ್ವ ಅವಳು ಹೆಣ್ಣಾಗಿ ಗಂಡಿನಿಂದ ನಿರೀಕ್ಷಿಸುವ ಪ್ರೀತಿಗೆ ಇಲ್ಲ ಅನಿಸುತ್ತದೆ. ಭಾರತೀಯ ಕುಟುಂಬದ ವ್ಯವಸ್ಥೆಯಲ್ಲಿ ಪತ್ನಿಯ ಗೃಹಿಣಿ ಪಾತ್ರಕ್ಕೇ ಆದ್ಯತೆ ಎನ್ನುತ್ತದೆ.

ಈ ಬಗೆಯ ಕವಿತೆಗಳನ್ನೋದಿದಾಗ ಕಮಲಾ ಕವಿತೆಗಳ ನಾಯಕಿ ಭಾರತೀಯ ಆದರ್ಶ ಸ್ತ್ರೀ ಯ ತಾಯಿಯ ಮುಖಕ್ಕಿಂತ ಪ್ರೇಯಸಿಯಾಗಿ, ಒಬ್ಬ ಸ್ವತಂತ್ರ ವ್ಯಕ್ತಿಯಾಗಿ ತನ್ನನ್ನು ಗುರುತಿಸಿಕೊಳ್ಳುವವಳು ಅನಿಸುತ್ತದೆ. ಮತ್ತು ನಮ್ಮ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆ ಸ್ತ್ರೀಯರಿಂದ ಬಹಳ ತ್ಯಾಗವನ್ನು ನಿರೀಕ್ಷಿಸುತ್ತದೆಯೇ ಹೊರತು ಅವಳ ಭಾವನಾತ್ಮಕ ಅಗತ್ಯಕ್ಕೆ ಸ್ಪಂದಿಸುವ ಸಂದರ್ಭಗಳು ಕಡಿಮೆ. ಈ ಹಿನ್ನೆಲೆಯಲ್ಲಿ ಕಮಲಾದಾಸ್ ಕೃತಿಗಳಲ್ಲಿನ ಸ್ತ್ರೀಯರು ದುಃಖಿತೆಯರು. 'summer vacation' ಕಥೆ ಕೂಡಾ ಈ ಮೇಲಿನ ಮಾತುಗಳಿಗೆ ನಿದರ್ಶನವಾಗಿದೆ.

ಕಮಲಾದಾಸ್ ವೈಶಿಷ್ಟ್ಯವಿರುವುದು ಅವರ ಬರವಣಿಗೆಯ ಕಲಾತ್ಮಕತೆಯಲ್ಲಿ, ಅವರ ಜೀವನ ಪ್ರೀತಿಯಲ್ಲಿ. ಹಳೆಯ ನೋವು ದುಃಖಗಳನ್ನು ನೆನೆಯುತ್ತಾ ಕೊರಗುವುದು ತನ್ನ ಸ್ವಭಾವವಲ್ಲ, ವರ್ತಮಾನದ ಬದುಕಿನ ಸೌಂದರ್ಯವನ್ನು ಸವಿಯುವುದು ತನ್ನ ಗುರಿ ಎಂದಿದ್ದಾರೆ. "ಪಕ್ಷಿಯುಡೆ ಮಣಂ ಕತೆ" (ಹಕ್ಕಿಯ ವಾಸನೆ ಎಂದು ಅನುವಾದಿತವಾಗಿದೆ) ಕಮಲಾದಾಸ್ ಅವರ ಕಥನ ಕೌಶಲ ಮತ್ತು ಅವರ ಸ್ವೋಪಜ್ಞ ಶೈಲಿಗೆ ನಿದರ್ಶನವಾಗಿದೆ. ಟೆಕ್ಸ್‌ಟೈಲ್ ಕಂಪೆನಿಯೊಂದರ ಜಾಹಿರಾತು ನೋಡಿ ಯುವತಿಯೊಬ್ಬಳು ಕೆಲಸ ಹುಡುಕಿ ದೊಡ್ಡ ಕಟ್ಟಡದ ಆಫೀಸ್ ಗೆ ಹೋದಾಗ ಆಗುವ ಅನುಭವ ಕಥೆಯಾಗಿದೆ. ಹೆಣ್ಣನ್ನು ದೇಹ ಮಾತ್ರವಾಗಿ ನೋಡುವ ವ್ಯವಸ್ಥೆಯನ್ನು ಕಮಲಾ ತೀವ್ರವಾಗಿ ಖಂಡಿಸುತ್ತಾರೆ. ಆದರೆ ಇಡೀ ಕಥೆ ಎಲ್ಲೂ ಒಂದುಸಾಲೂ ವಾಚ್ಯವಾಗಿಲ್ಲ. ಧ್ವನಿಪೂರ್ಣವಾಗಿ ಹೇಳುವುದರಲ್ಲಿ ಕಮಲಾ ನಿಪುಣರು. ಮಲೆಯಾಳಿ ಲೇಖಕ ಬಾಲಕೃಷ್ಣನ್ ಚುಳ್ಳಿಕ್ಕಾಡ್ ಪ್ರಕಾರ "truth was the beauty of her works. her mission was to realise the emotional truth.her works were never limited to what we call feminism now…she redefined traditional values and also tallied them with her own experience''.

ಹೀಗೆ ನಿಸ್ಸಂಕೋಚವಾಗಿ ತನ್ನ ಜೀವನಾನುಭವಗಳ ಅಭಿವ್ಯಕ್ತಿಯ ಜತೆಗೆ ಅವರ ಕಥೆ ಕವಿತೆಗಳ ಶೈಲಿ, ಮನುಷ್ಯರ ಅವ್ಯಕ್ತ ಮುಖಗಳ ಸೂಕ್ಷ್ಮವಾದ ಅವಲೋಕನ, ಅಪರಿಮಿತವಾದ ಜೀವನಪ್ರೀತಿ ಅವರ ಬರವಣಿಗೆಗೆ ಆಕರ್ಷಣೆಯನ್ನು ನೀಡಿವೆ.

ಕಮಲಾದಾಸ್ ರ ಪತಿ ಮಾಧವದಾಸ್ ಉದ್ಯೋಗನಿಮಿತ್ತ ದೆಹಲಿ,





# ಮಹಿಳಾ ವಿಮರ್ಶೆ ಮತ್ತು ಸಂಶೋಧನೆ

● ಡಾ. ಪ್ರೀತಿ ಶುಭಚಂದ್ರ

***ಪ್ರೀತಿ ಶುಭಚಂದ್ರ ಅವರ ಲೇಖನದ ಕೊನೆಯ ಕಂತು ನಿಮ್ಮ ಕೈಯಲ್ಲಿದೆ. ಮುಂದಿನ ಸಂಚಿಕೆಯಲ್ಲಿ ಪ್ರೊ. ಮನು ಚಕ್ರವರ್ತಿ, ಎನ್. ವಿದ್ಯಾಶಂಕರ್, ಶಿವಸುಬ್ರಹ್ಮಣ್ಯ, ಆಶಾದೇವಿ, ಪ್ರತಿಭಾ ನಂದಕುಮಾರ್, ಸಿ.ಜಿ. ಮಂಜುಳಾ, ವನಮಾಲಾ ವಿಶ್ವನಾಥ್, ಎಚ್.ಎಸ್. ರಾಜೇಶ್ವರಿ, ಸುಮಿತ್ರಾಬಾಯಿ ಮೊದಲಾದವರು ಈ ಲೇಖನ ಕುರಿತು ನಡೆಸಿದ ಸಂವಾದದ ಸಂಗ್ರಹ ರೂಪವನ್ನು ಪ್ರಕಟಿಸಲಾಗುವುದು. ಓದುಗರ ಪ್ರತಿಕ್ರಿಯೆಗೂ ಸ್ವಾಗತವಿದೆ.***

***– ಸಂ.***

*(ಹಿಂದಿನ ಸಂಚಿಕೆಯಿಂದ)*

ಬಿಗಿಬಂಧದೊಳಗೆ ಅತಿ ತನ್ಮಯತೆಯಿಂದ ಓದುವಿಕೆಯಲ್ಲಿ ತೊಡುಗುವ ಓದುಗ ಕಲ್ಪನೆಯಾಚೆ ಮಹಿಳಾ ಓದುವಿಕೆ ಇದೆ ಎಂಬುದನ್ನು ವಿಜಯಾದಬ್ಬೆ ಸ್ಥಾಪಿಸುತ್ತಾರೆ. ಕೃತಿಯ ಬಂಧದಲ್ಲಿ ಸ್ತ್ರೀವಾದಿ ಎಚ್ಚರದಿಂದ ತಾನಾಗಿಯೇ ಕಿಟಕಿಗಳನ್ನಲ್ಲ, ಬಾಗಿಲನ್ನು ಕಲ್ಪಿಸಿಯೋ ಆವರಣವನ್ನು ಒಡೆದೋ ಆಚೆ ನಿಂತು ಅರ್ಥಗ್ರಹಿಸುವ ಪರಿ ಇದು. ವಿಮರ್ಶೆಯ ತೊಡುಕುಗಳ ನಿರೂಪಣೆಯಲ್ಲಿ ಐ.ಎ. ರಿಚರ್ಡ್ಸ್‌ನಿಂದ ಪ್ರಸ್ತಾಪಿತವಾಗುವ ಹದಿಹರೆಯದ ಮಹಿಳಾ ಓದುಗರು ಆತನ ಪ್ರಕಾರ ಅವರದೇ ಜೊತೆಯ ಹುಡುಗರಿಗಿಂತ ಹೆಚ್ಚಿನ ಅರ್ಥಗ್ರಹಣ ಸಾಮರ್ಥ್ಯವುಳ್ಳವರಂತೆ. ಏಕೆಂದರೆ 19ನೇ ವಯಸ್ಸಿಗೇ ಹುಡುಗಿಯರು ಅಂತಿಮ ಸ್ವಭಾವಸ್ಥಿರತೆ ಹೊಂದಿದವರಾಗಿರುತ್ತಾರಂತೆ. ಹೀಗಾಗಿ ಹದಿವಯಸ್ಸಿನ ಗಂಡುಹುಡುಗರಿಗಿಂತ ಹೆಚ್ಚು ಸ್ಪಷ್ಟವಾಗಿ ಕಾವ್ಯಾರ್ಥವನ್ನು ಬಲ್ಲವರಾಗಿರುತ್ತಾರೆ. ರಿಚರ್ಡ್ಸ್ ಪ್ರಕಾರ, ಬದುಕಿನ ಅನನುಭವದೊಂದಿಗೆ ಕಾವ್ಯದೊಂದಿಗಿನ ಅನುಭವರಾಹಿತ್ಯ ಕೂಡ ವಿಮರ್ಶಕರಲ್ಲಿನ ಕೊರತೆಯಾಗುತ್ತದೆ. ಮಹಿಳಾ ಓದುಗರ ಬಗೆಗೆ ರಿಚರ್ಡ್ಸ್ ಹೇಳುವ ಈ ಇತ್ಯಾತ್ಮಕ ನಿಲುವುಗಳು ಪರೋಕ್ಷವಾಗಿ ಮಹಿಳಾ 'ವ್ಯಕ್ತಿಮತ್ತೆ' (subject)ಯ ಮಿತಿಯೂ ಆಗಬಲ್ಲವು. ಹಾಗಾದರೆ 19ನೇ ವಯಸ್ಸಿನಿಂದಾಚಿನ ಮಹಿಳಾ ಜೀವನಾನುಭವಗಳು ಕಾವ್ಯಗ್ರಹಿಕೆಯಲ್ಲಿ ಯಾವ ಪಾತ್ರ ವಹಿಸುತ್ತವೆ ಎನ್ನುವುದನ್ನು ರಿಚರ್ಡ್ಸ್ ಗಣನೆಗೇ ತೆಗೆದುಕೊಳ್ಳುವುದಿಲ್ಲ. ಹದಿಹರೆಯದ ರಮ್ಯ ಕನಸುಗಾರಿಕೆಯಲ್ಲಿ ಪುರುಷ ಪ್ರಜ್ಞೆಯೊಳಗೆ ಸೃಷ್ಟಿಗೊಂಡ ಮಹಿಳಾ ಮಾದರಿಗಳೇ ಹೆಚ್ಚು ವಿಜ್ರಂಭಿಸುತ್ತವೆ. ಕೆ.ಎಸ್.ನ. ಅವರ 'ಶ್ಯಾನುಭೋಗರ ಮಗಳು' ಕವಿತೆಯನ್ನೋದಿದ ಹುಡುಗಿಯೊಬ್ಬಳು "ನಾನೇ ಆ ಶ್ಯಾನಭೋಗರ ಮಗಳು" ಎಂದದ್ದುಂಟು. ರಾಯಚೂರು, ಗುಲ್ಬರ್ಗಾ ಭಾಗದಲ್ಲಿದ್ದು ಬಂದ ಮೈಸೂರಿನ ಸಾಹಿತ್ಯಾಸಕ್ತ ಮಹಿಳಾ ಓದುಗರೊಬ್ಬರು ನನ್ನೊಡನೆ ಹಂಚಿಕೊಂಡ ಅನುಭವವಿದು: ಮೈಸೂರು ಭಾಗದ ನಗರಕೇಂದ್ರಿತ ಮಧ್ಯಮವರ್ಗದ ಜೀವನಾನುಭವದ ಹಿನ್ನೆಲೆಯಲ್ಲಿ ರಚಿತವಾದ ಮಹಿಳಾ ಕಾದಂಬರಿಗಳನ್ನು ಆ ಭಾಗದ ಅವರ ಸ್ನೇಹಿತೆಯರು ಹತ್ತಾರು ಬಾರಿ ಓದುತ್ತಿದ್ದರಂತೆ. "ನಿಮ್ಮ ಮೈಸೂರು ಭಾಗದ ಹೆಂಗಸರು ಕೆಲಸಬೊಗ್ಗಿ ಅಷ್ಟಾಗಿಲ್ಲದೆ ಛಲೋ ಸೀರಿ ಉಟ್ಟಕೊಂಡು ವಾಕಿಂಗ್, ಪಿಕನಿಕ್ ಹೋಗ್ತಾರ್ರೀ. ನಮ್ಮ ಹೆಣಮಕ್ಕಳನ್ನ ನಿಮ್ಮ ಕಡೀಗೇ ಕೊಡೋದಂತ ನಿರ್ಧಾರ ಮಾಡೀವ್ರಿ" ಎಂಬ ಮಾತನ್ನು ಹೇಳಿದರಂತೆ. ಕೌಟುಂಬಿಕ ವ್ಯಾಪ್ತಿಯೊಳಗೇ ಸ್ಥಗಿತವಾದ ಓದುಗ ಸಂವೇದನೆಗೆ ಈ ಸಂಗತಿ ನಿದರ್ಶನ. ನವೋದಯದ ಗೃಹತಪಸ್ವಿನಿ ಮಾದರಿ ಒಂದು ತುದಿಯಾದರೆ, ನವ್ಯರ ಕೆಲ ಕೃತಿಗಳಲ್ಲಿ ಮೂಡಿಬಂದ ಜೈವಿಕ ಲಿಂಗತ್ವದ ನೆಲೆಯಲ್ಲೇ ಉಳಿದ ಸ್ತ್ರೀ ಇನ್ನೊಂದು ಮಾದರಿ. ಈ ಎರಡೂ ಮಾದರಿಗಳನ್ನು ಯಾವುದೇ ಸಂಘರ್ಷವಿಲ್ಲದೆ ಅಂತರ್ಗತೀಕರಿಸಿಕೊಳ್ಳುವಂತೆ ಮಾಡಬಲ್ಲ ಸಾಮಾಜಿಕ ಒತ್ತಾಯಗಳು ಹೆಣ್ಣುಮಕ್ಕಳ ಮೇಲಿರುತ್ತವೆ. ಮಹಿಳಾವಿಮರ್ಶೆ ಇಂಥ ಸಾಹಿತ್ಯಕ ಸ್ತ್ರೀಮಾದರಿಗಳ ನಿರ್ಮಾಣವನ್ನು, ಸಾಮಾಜಿಕ ಒತ್ತಾಯಗಳನ್ನು ಏಕಕಾಲಕ್ಕೆ ತಿರಸ್ಕರಿಸುತ್ತದೆ. ಕಾದಂಬರಿಯೊಳಗಿನ ನೈತಿಕದೃಷ್ಟಿ ಹಾಗೂ ಕಾದಂಬರಿಯಾಚಿನ ಸಾಮಾಜಿಕ, ನೈತಿಕ ದೃಷ್ಟಿಗಳೆರಡರ ವಿಸಂಗತಿಗಳನ್ನು ಶೋಧಿಸುವ ಜವಾಬ್ದಾರಿಯನ್ನು ಮಹಿಳಾವಿಮರ್ಶೆ ಹೊಂದಿದೆ. ಕನ್ನಡ ಮಹಿಳಾ ವಿಮರ್ಶೆಯು ಅಕೆಡೆಮಿಕ್ ವಲಯದ ಸಾಹಿತ್ಯ ವಿಮರ್ಶೆಯ ಮಿತಿಗಳ ಬಗ್ಗೆ ಗಾಯಿತ್ರಿ ಸ್ಪೀವಾಕ್ ಹೊಂದಿರುವ ಆತಂಕಕ್ಕೆ ಹೊರತಾಗಿದೆ. ರಾಘವಾಂಕ ಕವಿಯ ಮೌಲ್ಯನಿರ್ಣಯವನ್ನು ದಮನಿತರ ನೆಲೆಯಿಂದ ಎಚ್.ಎಸ್. ಶಿವಪ್ರಕಾಶ್ ಹೀಗೆ ಮಾಡುತ್ತಾರೆ: "..... ಇಷ್ಟಾದರೂ ರಾಘವಾಂಕನು ಹರಿಶ್ಚಂದ್ರ, ವಿಶ್ವಾಮಿತ್ರರ ಪಾರ್ಟಿಯವನು. ಹೊಲತಿ, ವೀರಬಾಹುಗಳ ಪಕ್ಷದವನಲ್ಲ. ಸತ್ಯವನ್ನು ಕಾಣುವ ಹರಿಶ್ಚಂದ್ರನನ್ನು ಮೆರೆಸುತ್ತಾನೆಯೇ ಹೊರತು, ಸತ್ಯವನ್ನು ಕಾಣಿಸುವ ಹೊಲತಿಯರನ್ನಲ್ಲ, ವೀರಬಾಹುವನ್ನಲ್ಲ..... ಮೇಲು/ಕೀಳುಗಳ ಸೂತಕವನ್ನು ತೊಳೆದುಕೊಳ್ಳದ ಕಾರಣ ರಾಘವಾಂಕ ಹರಿಹರನಂತೆ ಮೇಲು/ಕೀಳುಗಳನ್ನು ಮೀರಿದ ಭಕ್ತಿಯೆಂಬ ಪ್ರತಿಸಂಸ್ಕೃತಿಯನ್ನು ಕಟ್ಟಲಾರ" (ಮಧ್ಯಕಾಲೀನ ಸಾಹಿತ್ಯದಲ್ಲಿ ಕೆಳಸಂಸ್ಕೃತಿಗಳು, ಪ್ರತಿಸಂಸ್ಕೃತಿಗಳು, ವ್ಯಾಜ್ಯಗಳು, ರಾಜಿಗಳು, ವಿದಾಯಗಳು, ಮೊದಲಕಟ್ಟಿನ ಗದ್ಯ. ಎಚ್.ಎಸ್. ಶಿವಪ್ರಕಾಶ್, ಅಭಿನವ, ಬೆಂ.1995, ಪು.125). ಒಡಲಬೇಟೆ ಮತ್ತು ಕದನದ ತೀಟೆಗಳ ದುರಂತಮಯ ಸಂಘರ್ಷದ ಕತೆಯಾದ ನಂಜುಂಡಕವಿಯ 'ರಾಮನಾಥ ಚರಿತೆ'ಯ ರತ್ನಾಜಿ ಪಾತ್ರದ ತಾತ್ವಿಕತೆಯನ್ನು ಶಿವಪ್ರಕಾಶ್ 'ವೀರಯುಗದ ಮಕಕ್ಕೆ ಎತ್ತಿದ ಮಂಗಳಾರತಿ'ಯಾಗಿ ಪರಿಭಾವಿಸಿದ್ದಾರೆ. ದಲಿತವರ್ಗದ ಶರಣೆಯರನ್ನು ಅಂಬೇಡ್ಕರ್ ಅವರ ಮಹಿಳಾಪರ ಚಿಂತನೆಗಳ ಹಿನ್ನೆಲೆಯಲ್ಲಿ ಮನಜ ಅವರು ವಿವೇಚಿಸಿದ್ದಾರೆ.

ರೂಪ ಮತ್ತು ವಿಷಯ, ವಸ್ತು ನಡುವಿನ ಸಂಬಂಧದ ಚರ್ಚೆ ಸಾಹಿತ್ಯ ಮೀಮಾಂಸೆಯಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ಸಾಹಿತ್ಯ ರಚನೆ ಹಾಗೂ ಓದುಗ ಸಂದರ್ಭದ ಅರ್ಥಗ್ರಹಣೆಯಲ್ಲಿ ಸಾಮಾಜಿಕ ಮತ್ತು ವ್ಯಕ್ತಿನಿಷ್ಠ ಅನುಭವ'ವಸ್ತು'ವನ್ನು ಆಕಾರವಾಗಿ ನಿರ್ಮಿಸುವ, ಗ್ರಹಿಸುವ ಯತ್ನ ಮುಖ್ಯವಾಗುತ್ತದೆ. ಪುರುಷಕೇಂದ್ರಿತ ಜ್ಞಾನ ಮೀಮಾಂಸೆಯಲ್ಲಿ ಉದ್ದಕ್ಕೂ ಅನುಭವಕ್ಕೆ ಆಕಾರ–ರೂಪವನ್ನು ಕಲ್ಪಿಸುವ ಅಧಿಕಾರಕ್ಕೆ ಮಾನ್ಯತೆ ಇದೆ. ಅಭಿಜಾತ ಕಲಾಸಿದ್ಧಾಂತಗಳು ಪ್ರತಿಪಾದಿಸುವ ರೂಪನಿಷ್ಠ ಪ್ರಕಾರನಿಷ್ಠ ಗುಣಗಳ ನಿರೀಕ್ಷೆಯನ್ನು ರೊಮ್ಯಾಂಟಿಕ್ ಕಲಾಮೀಮಾಂಸೆ ತಿರಸ್ಕರಿಸಿತು. ವ್ಯಕ್ತಿನಿಷ್ಠ,

ಸಮುದಾಯನಿಷ್ಠ ಪ್ರತಿಭಾಜನ್ಯ ಸಿದ್ಧಾಂತಗಳು ಕುವೆಂಪು, ಕಾರಂತ, ಬೇಂದ್ರೆ, ಪುತಿನರಂಥ ಉನ್ನತೀಕರಣಗೊಂಡ ವ್ಯಕ್ತಿಪ್ರತಿಭೆಗಳನ್ನು ಮಾನ್ಯಮಾಡಿದವು. ಆದರೆ ಇವರಿಗೆ ತಮ್ಮೊಳಗಿನ ಬರಹಗಾರನನ್ನು ಬರೆಯುವುದು ಮುಖ್ಯವಾಗಿದ್ದು, ಸೃಜನಶೀಲಕಾರ್ಯ ಕೈಗೊಳ್ಳಬಲ್ಲ ಸಮರ್ಥ ಓದುಗ ವರ್ಗವನ್ನು ಇವರು ಸೃಷ್ಟಿಸಲಿಲ್ಲ. ಅವರ ಕೃತಿರಸಾಸ್ವಾದನ, 'ಸಹೃದಯ ಸಾಹಸ ರಸ ಜಾತ್ರೆ'ಯಲ್ಲಿ ಮಹಿಳಾ ಓದುಗರು ತೊಡುಗುವಲ್ಲಿ ಇದ್ದ ಕೌಟಂಬಿಕ ನಿರ್ಬಂಧಗಳು ಮಹಿಳಾ ಸೃಜನಶೀಲತೆಯನ್ನು ಬೇರೆ ದಿಕ್ಕಿಗೆ ಹೊರಳಿಸಿತು. ಒಂದು ಧಾರೆ ಜನಪ್ರಿಯ ಕಥಾಸಾಹಿತ್ಯ ಸೃಷ್ಟಿಯಲ್ಲಿ ಪ್ರಕಟವಾದರೆ, ಸಮಾಜ ನಿರ್ಮಿಸಿದ ಸ್ತ್ರೀಮಾದರಿಯನ್ನು ನಿರಾಕರಿಸುವ, ಸ್ತ್ರೀತ್ವದ ಹುಡುಕಾಟದ ಆಶಯವುಳ್ಳ ಮತ್ತೊಂದು ಧಾರೆಯಾಗಿ ಸ್ತ್ರೀವಾದಿ ಎಚ್ಚರವುಳ್ಳ ಸಾಹಿತ್ಯ ನಿರ್ಮಾಣ ವಾಯಿತು. ಇಂಥ ಸಂದರ್ಭದಲ್ಲಿ ಮತ್ತದೇ ಪುರುಷ ವಿಮರ್ಶೆಯು ಲೇಖಕಿಯರಲ್ಲಿ ಸಂದಿಗ್ಧಗಳನ್ನು ಹುಟ್ಟುಹಾಕಿತು.

'ಸ್ತ್ರೀಸಂವೇದನೆ'ಯ ಪ್ರಕಟನೆಯನ್ನೇ ಮಹಿಳಾ ಸೃಜನಶಿಲತೆಯ ಅಧಿಕೃತತೆಯಾಗಿ ಪ್ರಶಂಸಿಸುವ ಪುರುಷ ವಿಮರ್ಶೆಗೆ ಪ್ರತಿಭಾ ನಂದಕುಮಾರ್ ಹೀಗೆ ಪ್ರತಿಕ್ರಿಯಿಸುತ್ತಾರೆ: "...... ಸ್ವಲ್ಪ ಬೋಲ್ಡ್ ಆಗಿ ಬರೆದರೆ ಫೆಮಿನಿಸ್ಟ್ ಅಂದುಬಿಡುವುದು, ಸ್ವಲ್ಪ ರೊಮ್ಯಾಂಟಿಕ್ ಆಗಿ ಬರೆದರೆ ಫೆಮಿನೈನ್ ಅನ್ನುವುದು. ಇದನ್ನೆಲ್ಲ ಬಿಡಿ. ಇದೆಲ್ಲ ನಾನ್‌ಸೆನ್ಸ್, ಹೆಣ್ಣು ಎಲ್ಲದರ ಸಂಕೀರ್ಣ ಮಿಶ್ರಣ. ಯಾವುದನ್ನೂ ಸದಾ ತಿರಸ್ಕರಿಸುವುದೂ ಇಲ್ಲ, ಸದಾ ಪುರಸ್ಕರಿಸುವುದೂ ಇಲ್ಲ". ('ಆಹಾ, 'ಪುರುಷಾಕಾರಂ!', 'ಕವಿತೆಗೆ ಕಾರಣ')

ಆದ್ದರಿಂದ ಕೃತಿನಿಷ್ಠ ರೂಪನಿಷ್ಠ ವಿಮರ್ಶಾ ಅಧ್ಯಯನ ಮಾದರಿಗಳನ್ನು ಬಿಟ್ಟು ಸಂಕಥನಾತ್ಮಕತೆಯನ್ನು ಈ ಹೊತ್ತಿನ ಮಹಿಳಾ ವಿಮರ್ಶೆ ಕೇಂದ್ರವಾಗಿಟ್ಟುಕೊಂಡಿದೆ. ಜನಪದ ಕತೆ, ಗಾದೆ, ಕಥನಗೀತೆ, ಆಚರಣೆ, ಕಾವ್ಯಗಳ ವಿಮರ್ಶಾತ್ಮಕ ಅಧ್ಯಯನವು ಮಹಿಳಾ ಬದುಕಿನ ಸಂಕಥನವನ್ನು ರೂಪಿಸುವೆಡೆ ಆಸಕ್ತವಾಗಿದೆ. ಎಚ್.ಎಸ್. ಶ್ರೀಮತಿಯವರು ತ್ರಿವೇಣಿಯವರ ಕಥಾಸಾಹಿತ್ಯವನ್ನು ಕೃತಿನಿಷ್ಠನೆಲೆಯಲ್ಲಿ ಮಾತ್ರ ಅಧ್ಯಯನ ಮಾಡುವುದಿಲ್ಲ. ತ್ರಿವೇಣಿ ಕೃತಿಗಳ ಅಧ್ಯಯನವನ್ನು ಅವರು 'ಶುದ್ಧ ಸಾಹಿತ್ಯಕ' ಚರ್ಚೆಯಾಗಿ ಬೆಳೆಸುವುದಿಲ್ಲ. ಅವರ ಆಸಕ್ತಿ ಇರುವುದು "ತ್ರಿವೇಣಿಯವರ ಕಾದಂಬರಿಗಳು ಓದುಗರಿಗೆ 'ಕಾಣಿಸುವ' ಮಹಿಳಾ ಲೋಕವು ನಾವು ಕಂಡು ಅನುಭವಿಸುತ್ತಿರುವ ಮಹಿಳಾಲೋಕವನ್ನು ಗ್ರಹಿಸಲು ಎಷ್ಟರ ಮಟ್ಟಿಗೆ ನೆರವಾಗಬಲ್ಲದು" ಎಂಬುದರಲ್ಲಿ *(ತ್ರಿವೇಣಿಯವರ ಕಾದಂಬರಿಗಳ ಮರು ಓದು, 'ಸೇರಿಕೊಂಡ ಎಳೆಗಳು', ಪು. 151).*


ತ್ರಿವೇಣಿ

ಎಮಿಲಿ ಬ್ರಾಂಟೆಯ "What were the use of my creation , if I were entirely contained here" ಎಂಬ ಮಾತುಗಳಿಗೆ ಬರೆದ ವಿಮರ್ಶಾತ್ಮಕ ವ್ಯಾಖ್ಯಾನವಾಗಿ ಶಶಿ ದೇಶಪಾಂಡೆಯವರ 'The Binding vine' ಕಾದಂಬರಿ ಇದೆ. ಕವಯಿತ್ರಿ ಅತ್ತೆಯ ಕಾವ್ಯ ಹಾಗೂ ಆಕೆಯ ಆತ್ಮಚರಿತ್ರೆಗಳ ಓದುಗಳಾಗಿ ಊರ್ಮಿ ಅವುಗಳ ನಡುವಿನ ಸಂಬಂಧದ ಎಳೆಗಳನ್ನು ರಚಿಸಿಕೊಳ್ಳುತ್ತಾ ಸಾಗುತ್ತಾಳೆ. ಇದರೊಂದಿಗೆ ತನ್ನ ವೈಯಕ್ತಿಕ ಬದುಕಿನ ಎಳೆಗಳನ್ನೂ ಓದುಗಳಾಗಿ ಊರ್ಮಿ ಹೊಸೆಯುತ್ತಾಳೆ. ಗತಿಸಿದ ಅತ್ತೆ ಮೀರಾಳ ಬರಹಗಳು–ಪಕ್ಕದ ಕೊಠಡಿಯ ಖೈದಿಗೆ ಗೋಡೆ ಕುಟ್ಟುತ್ತಾ ರವಾನೆ ಮಾಡಿದ ಮತ್ತೊಬ್ಬ ಖೈದಿಯ ಸಂದೇಶದಂತೆ ಊರ್ಮಿಗೆ ಭಾಸವಾಗುತ್ತದೆ. ಆ ಸಂದೇಶದ ಅರ್ಥವಂತಿಕೆಯ ಶೋಧವೇ ಕವಿ ಮೀರಾಳನ್ನೂ ಅವಳ ಕಾವ್ಯದ ಓದುಗಳಾದ ತನ್ನನ್ನೂ ಅರ್ಥೈಸಿಕೊಳ್ಳುವ ಕ್ರಮವಾಗಿಬಿಡುತ್ತದೆ.

ಹೀಗಾಗಿ ಮಹಿಳಾ ಬರಹವೆಂಬುದು ಬರಹದೊಳಗಿನ ಬರಹಗಾರಳನ್ನು ಮಾತ್ರ ಹೊರಹಾಕುವುದಿಲ್ಲ. ನವ್ಯರಂತೆ ಓದುಗರನ್ನು ಬಂಧಿಸಿಡುವ ಕಿಟಕಿಗಳಿಲ್ಲದ ಕೋಟೆಯಂಥ ಬಂಧಸೌಷ್ಠವವನ್ನು ಮಹಿಳಾ ಬರಹಗಳು ಹೊಂದುವುದಿಲ್ಲ. ಜೀವನಾನುಭವ, ಓದಿನ ಅನುಭವದ ಕೊರತೆಗಳು ಕಾವ್ಯಾರ್ಥಗ್ರಹಿಕೆಯ ತೊಡಕಾಗಿ ರಿಚರ್ಡ್ಸ್‌ಗೆ ಕಾಣುತ್ತದೆ. ಆದರೆ ಮಹಿಳಾಓದು ತನ್ನ ಬದುಕಿನೊಂದಿಗೆ ಕೃತಿ ನಡೆಸುವ ಸಂವಾದದ ಅನುಭವವನ್ನು ಮುಖ್ಯವೆಂದು ಪರಿಗಣಿಸುತ್ತದೆ. ರಾಚನಿಕ ಹಾಗೂ ನಿರಚನ ಸಿದ್ಧಾಂತಗಳು ಅರ್ಥಗ್ರಹಿಕೆಯ ಸೂಕ್ಷ್ಮಗಳನ್ನು ತರಬೇತಿಗೊಳಿಸುವ ವಿಮರ್ಶಾ ತಂತ್ರಗಳನ್ನು ಪರಿಚಯಿಸಿದರೂ ಅವು ಕೃತಿಯನ್ನು ಎಲ್ಲೋ ಅಮಾನವೀಯಗೊಳಿಸಿದವೆನಿಸುತ್ತದೆ. ಆದರೆ ಮಹಿಳಾ ಸಾಹಿತ್ಯ ಕೃತಿಯ ಮಹಿಳಾ ಓದು ಮಾನವೀಯ ಸ್ಪಂದನಗಳನ್ನು ಜಾಗ್ರತಗೊಳಿಸುವೆಡೆ ತುಡಿಯುತ್ತದೆ.

ಚಾವಡಿರಂಗನ ಮಗಳಾದ ಲಕ್ಷ್ಮಿ ಎಂಬಾಕೆಯ ಅಂಕಿತದಲ್ಲಿ 'ಶ್ರೀರಾಮ ಪಟ್ಟಾಭಿಷೇಕಂ' ಕೃತಿಯನ್ನು ಪ್ರಕಟನೆಯ ಅನುಕೂಲಕ್ಕೆ ನಂದಳಿಕೆ ಲಕ್ಷ್ಮೀನಾರಾಯಣ ರಚಿಸಿದ. ಈತನ 'ರಾಮಾಶ್ವಮೇಧ' ಕಾವ್ಯವು ಓದುಗ ಪ್ರಜ್ಞೆಯ ಸಂಕೇತವಾದ ಮನೋರಮೆಯನ್ನು ಕೃತಿಯುದ್ದಕ್ಕೂ ಸ್ಥಾಪಿಸಿದೆ. ಮಹಿಳಾ ಶ್ರೋತೃವಿಗೆ ನಿರೂಪಿಸುವ ತಂತ್ರವು ಶಾಸ್ತ್ರ ಹಾಗೂ ಕಾವ್ಯಗಳಲ್ಲಿ ಮೊದಲಿನಿಂದಲೂ ಬಳಕೆಯಾಗಿದೆ. ಕಾವ್ಯಾರ್ಥದ ಸಿದ್ಧಗ್ರಾಹಕಿಯಂತೆ ಶ್ರೋತೃವಾಗಿ ಸೀಮಿತಗೊಳ್ಳುವ ಪರಿ ಆಧುನಿಕ ಮಹಿಳಾ ಓದುಗರದಲ್ಲ. 1927ರಲ್ಲಿ ನಡೆದ ಹದಿಮೂರನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಸ್ವಾಗತ ಮಂಡಲಿಯ ಅಧ್ಯಕ್ಷ ಭಾಷಣ ಮಾಡಿದ ಉಳ್ಳಾಳ ಮಂಗೇಶರಾಯರು ರಾಮಾಶ್ವಮೇಧದಲ್ಲಿ ಆಧುನಿಕ ಸಂವೇದನೆಯನ್ನು ಗುರುತಿಸುತ್ತಾರೆ. ".....ಹಿಂದಕ್ಕೆ ತೆರಳಲಿಕ್ಕಿರುವ ಲಕ್ಷ್ಮಣನಿಗೆ ಸೀತೆ ಹೇಳಿದ ಮಾತುಗಳಲ್ಲಿ ಕೊನೆಗೆ ತುಂಬಿದ ಬಸುರಿಯಾಗಿ ಗಂಡನಿಂದ ತ್ಯಜಿಸಲ್ಪಟ್ಟ ಸ್ತ್ರೀಯರ ನಿವಾಸಕ್ಕೆ 'ಒಂದು ದಮ್ಮಣಿಯನೇರ್ಪಡಿಸೆ' ಎಂದು ರಾಮನಿಗೆ ತಿಳಿಸುವಂತೆ ಹೇಳಿದ ಮಾತುಗಳ ಅಭಿಪ್ರಾಯವು ತೀರ ಆಧುನಿಕವಾಗಿದೆ" (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ 12, ಸಂಚಿಕೆ 2 ಜುಲೈ 1927, ಪು : 85) ಸಮಕಾಲೀನ ಮಹಿಳಾ ಸುಧಾರಣಾವಾದಿ ಚಟುವಟಿಕೆಗಳ ಪ್ರಭಾವವನ್ನು ಉಳ್ಳಾಳರ ಸೂಕ್ಷ್ಮ ವಿಮರ್ಶಾ ದೃಷ್ಟಿ ಗ್ರಹಿಸಿತು. ಆದರಿದು, "ಸಂವಾದದ ಸುವರ್ಣದ ಚೌಕಟ್ಟು" ಕಲ್ಪಿಸಿದ ಮನೋರಮೆಯ ವಿಮರ್ಶಾ ಸಂವೇದನೆಯೊಳಗಿನಿಂದ ಮೂಡಿಬಂದ ವಿಚಾರವಾಗದಿರುವುದು ವಿಪರ್ಯಾಸ.

ಕನ್ನಡ ಎಂ.ಎ. ಓದುತ್ತಿರುವ ವಿದ್ಯಾರ್ಥಿನಿಗೆ ಒಮ್ಮೆ 'ಆಹಾ, ಪುರುಷಾಕಾರಂ!' ಕವನ ಸಂಗ್ರಹವನ್ನು ಓದಲೆಂದು ಕೊಟ್ಟೆ. "ಈ ಪುಸ್ತಕವನ್ನು ನಾನು ಓದಿದೆ ಮೇಡಂ, ಚೆನ್ನಾಗಿದೆ. ಆದರೆ ನನ್ನ ಟೇಬಲ್ ಮೇಲೆ ಇದ್ದ ಆ ಪುಸ್ತಕ ನೋಡಿ ನಮ್ಮ ಮನೆಯಲ್ಲಿ ದೊಡ್ಡ ರಂಪವಾಯ್ತು" ಎಂದು ವಿದ್ಯಾರ್ಥಿನಿ ಸಪ್ಪೆ ಮುಖ ಹೊತ್ತು ಹೇಳಿದಳು. ಪ್ರತಿಭಾ ಅವರ ಕಾವ್ಯದ ಓದಿನಲ್ಲಿ ಈ ಪ್ರಕರಣವೂ ಸೇರಿಕೊಳ್ಳುತ್ತದೆ. ಅಷ್ಟೇ ಅಲ್ಲ, ಮಹಿಳಾ ಸೃಜನಶೀಲತೆಯ ಕುರಿತಂತೆ ಸಿದ್ಧವಾಗಿರುವ ಮಿಥ್‌ಗಳೂ ಮಹಿಳಾ ಸಾಹಿತ್ಯದ ಓದಿನ ಸಂದರ್ಭದಲ್ಲಿ ಪ್ರಭಾವಶಾಲಿಯಾಗಿರುತ್ತವೆ. ಜ್ಯೋತಿಷ್ಮತಿ ತೈಲವನ್ನು ಕುಡಿದು ಕವಿಗಳಾದ ಕಂತಿ,

ಮುಂಬೈ, ಕಲ್ಕತ್ತಾ, ಶ್ರೀಲಂಕಾ ಮೊದಲಾದ ಕಡೆ ವಾಸಿಸುವಾಗ ಕಮಲಾ ಅವರಿಗೂ ಈ ಅನುಭವ ಬರವಣಿಗೆಗೆ ವೈವಿಧ್ಯ ತಂದಿತು. ಬಾಲ್ಯದಲ್ಲಿ ಕಲ್ಕತ್ತಾದ ಯುರೋಪಿಯನ್ ಶಾಲೆಯೊಂದರಲ್ಲಿ ಓದಿದ ಕಮಲಾಗೆ ವರ್ಣಭೇದದ ಅರಿವು ಚಿಕ್ಕವಯಸ್ಸಿನಲ್ಲೇ ಆಯಿತು. ಈ ವಿವರಗಳನ್ನು ಅವರು 'ಬಾಲ್ಯದನೆನಪುಗಳು' ಕೃತಿಯಲ್ಲಿ ದಾಖಲಿಸಿದ್ದಾರೆ. 'ಮನೋಮಿ' ಯಂತಹ ಕೃತಿಯಲ್ಲಿ ಜನಾಂಗೀಯ ಕಲಹದ [ಶ್ರೀಲಂಕಾ–ತಮಿಳು] ಕುರಿತು ಬರೆದಿದ್ದಾರೆ. ಅತ್ಮ ಚರಿತ್ರೆಗಳ ಮೂರು ಭಾಗಗಳಲ್ಲಿ ಮತ್ತು "ಸಮ್ಮರ್ ವೆಕೇಶನ್" ಕಥೆಗಳಲ್ಲಿ ಹುಟ್ಟಿ ಬೆಳೆದ ಊರು, ಅಲ್ಲಿಯ ಜನ ಜೀವನದ ಸಮೃದ್ಧ ವಿವರಗಳಿವೆ. ಸಮ್ಮರ್ ಇನ್ ಕಲ್ಕತ್ತ, ದ ಡಿಸೆಂಡೆಂಟ್ಸ್, ಓನ್ಲಿ ದ ಸೋಲ್ ನೋಸ್ ಹೌ ಟು ಸಿಂಗ್, ದ ಸಿರಿನ್ಸ್, ಓಲ್ಡ್ ಪ್ಲೇ ಹೋಂ ಅಂಡ್ ಅದರ್ ಪೊಯಮ್ಸ್, ಕಮಲಾಗೆ ಖ್ಯಾತಿ ತಂದ ಕವನ ಸಂಗ್ರಹಗಳು. 'alphabet of lust' ಇಂಗ್ಲಿಷ್‌ನಲ್ಲಿ ಬರೆದ ಕಾದಂಬರಿ. 'a doll for the child prostitute' ಮತ್ತು 'padmavati the harlot and other stories' ಇಂಗ್ಲಿಷ್ ನಲ್ಲಿರುವ ಕವನಸಂಗ್ರಹಗಳು. ಏಶಿಯನ್‌ಪೊಯಟ್ರಿ ಅವಾರ್ಡ್, ಕೇರಳ ಸಾಹಿತ್ಯಅಕಾಡೆಮಿ ಬಹುಮಾನ, ಇಂದಿರಾಪ್ರಿಯದರ್ಶಿನಿ, ವೃಕ್ಷಮಿತ್ರ ಅವಾರ್ಡ್, ವೈಯಲಾರ್ ಪ್ರಶಸ್ತಿಗಳ ಜತೆಗೆ ಹಲವಾರು ಅಂತಾರಾಷ್ಟ್ರೀಯ ಪ್ರಶಸ್ತಿಗಳೂ ಕಮಲಾ ಅವರಿಗೆ ಲಭಿಸಿವೆ. ಶ್ರೀಲಂಕಾ ದಲ್ಲಿನ ಜನಾಂಗ ದ್ವೇಷದ ಕತೆ "ಮನೋಮಿ"ಯನ್ನು ಸಾರಾ ಅಬೂಬಕ್ಕರ್ ಕನ್ನಡಕ್ಕೆ ಅನುವಾದಿಸಿದ್ದಾರೆ. "ಬಾಲ್ಯಕಾಲ ಸ್ಮರಣಂಗಳ್" ಕೃತಿಯನ್ನು ನಾ. ದಾಮೋದರಶೆಟ್ಟಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಕತೆಗಳು, ಕವಿತೆಗಳು ಕೆಲವೇ ಕೆಲವು ಕನ್ನಡಕ್ಕೆ ಅನುವಾದಗೊಂಡಿವೆ. "ನೀರ್ಮಾದಳಂ ಪೂತ್ತ ಕಾಲಮ್" ಕೃತಿಯನ್ನು ಪಾರ್ವತಿ ಐತಾಳ್ ಅನುವಾದಿಸಿದ್ದಾರೆ. "ನೀರ್ಮಾದಳಂ ಪೂತ್ತ ಕಾಲ್ಂ"ಗೆ ವಯಲಾರ್ ಪ್ರಶಸ್ತಿ ಸಿಕ್ಕಿದೆ. ಕಮಲಾ ಒಳ್ಳೆಯ ಚಿತ್ರಕಲಾವಿದೆ ಸಹಾ. ಕೊಚಿನ್‌ನಲ್ಲಿ ಅವರ ಚಿತ್ರಗಳ ಪ್ರದರ್ಶನವೂ ನಡೆದಿದೆ. ಕೊಚಿನ್‌ನಲ್ಲಿ ನೆಲೆಸಿದಮೇಲೆ ಅವರು ಪರಿಸರಕಾಳಜಿ, ಸಾಮಾಜಿಕ ಕಾಳಜಿಯ ಸಂಘಟನೆಗಳ ಜತೆ ಸಂಪರ್ಕ ಹೊಂದಿದ್ದರು. ಮುಂಬಯಿಯಲ್ಲಿದ್ದಾಗ ಸಾಹಿತ್ಯ, ಸಂಸ್ಕೃತಿ ಯಲ್ಲಿ ಆಸಕ್ತಿಯಿದ್ದ ಸಮಾನಮನಸ್ಕರ ವೇದಿಕೆ "ಬಹು ತಾಂತ್ರಿಕ"ವನ್ನು ಸಂಘಟಿಸಿದ್ದರು.




ಇಷ್ಟು ಬರವಣಿಗೆ ಪ್ರಸಿದ್ಧಿಗಳ ನಂತರವು ಕಮಲಾದಾಸ್ ಅವರನ್ನು ನೋಡಿ ದಾಗ ಒಂದು ಬಗೆಯ ವಿಷಾದ, ಅತೃಪ್ತಿ ಅವರ ಮಾತುಗಳಲ್ಲಿ ಮುಖ ಭಾವದಲ್ಲಿ ಕಾಣುತಿತ್ತು. ಅವರ ನಿರಂತರ ಸೃಜನ ಶೀಲತೆಗೂ ಇದಕ್ಕೂ ಸಂಬಂಧವಿರಬಹುದು. ಕಮಲಾದಾಸ್ ಅವರ ಕೃತಿಗಳಲ್ಲಿ ಕಾಣುವ ವಿವಾದಾಸ್ಪದ



ವಿಚಾರಗಳನ್ನು ರುಚಿಯಾಗಿ ಓದುವ ಓದುಗರಿಗೆ ಅವರ ಕೃತಿಗಳನ್ನು ಸಮಗ್ರವಾಗಿ ಓದುವ, ಅವರ ವ್ಯಕ್ತಿತ್ವವನ್ನು ಸಾವಧಾನವಾಗಿ ಗ್ರಹಿಸುವ ವ್ಯವಧಾನವಿಲ್ಲ. ಇದಕ್ಕೆ ಮಾಧ್ಯಮಗಳೂ ತಮ್ಮ ಕಾಣಿಕೆ ಸಲ್ಲಿಸಿವೆ. ಗುರುವಾಯೂರಿನ "ಕೃಷ್ಣ ಇನ್"ನಲ್ಲಿ ಉಳಿದುಕೊಂಡಿದ್ದ ನಾವು ಪುನ್ನಯೂರ್ ಕುಳಕ್ಕೆ ಹೋಗಲು ಟ್ಯಾಕ್ಸಿ ಬೇಕೆಂದಾಗ ಅಲ್ಲಿನ ಮ್ಯಾನೇಜರ್ ನಾವು ಹೋಗುವ ಉದ್ದೇಶ ತಿಳಿದು "ಆ ನೀರ್ಮಾದಳ ಮರ ಕಲ್ಪನೆಯದು, ಅಲ್ಲಿ ನಿಜವಾಗಿ ಅಂತಹುದೊಂದು ಇರಲೇ ಇಲ್ಲ" ಅಂದರು. ಕಮಲಾದಾಸ್ ನಿಜವಾಗಿ ಏನು ಬರೆದಿದ್ದಾರೆಂದು ಅವರಿಗೆ ಗೊತ್ತಿರಲಿಲ್ಲ. ಬಹಳ ಜನ ಅವರು ಕಲ್ಪಿಸಿಕೊಂಡು ಬರೆದಿದ್ದನ್ನು ನಿಜವೆಂದೂ, ನಿಜವಾದದ್ದನ್ನು ಕಲ್ಪನೆಯೆಂದೂ ಭಾವಿಸುತ್ತಾರೆ. (ಮೇಲೆ ಉಲ್ಲೇಖಿಸಿದ ಆತ್ಮಚರಿತ್ರೆಗಳಲ್ಲದೆ, ಒಟ್ಟಯಡಿಪಾದ, ಡೈರಿ ಕುರಿಪ್ಪುಗಳ್ ಎಂಬ ಕೃತಿಗಳನ್ನೂ ಬರೆದಿದ್ದಾರೆ.)

ಉನ್ನತ ಸಂಸ್ಕಾರದ ಅಜ್ಜಿಯ ಜತೆ ಬಾಲ್ಯವನ್ನು ಕಳೆದ ಕಮಲಾ ಸುಂದರವಾದ ಬದುಕನ್ನು ತೀವ್ರವಾದ ರಾಗಭಾವಗಳ ಜತೆ ಬದುಕಿದರು. ಈಗಲೂ, ನನಗೆ 73ರ ಇಳಿ ವಯಸ್ಸಿನಲ್ಲೂ ಉಗುರಿಗೆ ಮದರಂಗಿ (ಮೆಹಂದಿ) ಹಚ್ಚಿಕೊಂಡಿದ್ದ ಅವರ ಜೀವನಾಸಕ್ತಿ ಮುಖ್ಯವೆನಿಸುತ್ತದೆ. ಅವರ ಕುಟುಂಬದ ಹಿನ್ನೆಲೆ ಮತ್ತು ಮುಂಬಯಿ ಕಲ್ಕತ್ತಗಳ ಪರಿಸರ ಅವರಿಗೆ ಮುಕ್ತವಾಗಿ ಬರೆಯಲು ಬೇಕಾದ ಆತ್ಮವಿಶ್ವಾಸವನ್ನು ದೊರಕಿಸಿ ಕೊಟ್ಟಿತು. ❑

# ದೇವೀ ಮಹಾತ್ಮ್ಯೆ

■ ಲಲಿತಾ ಸಿದ್ದಬಸವಯ್ಯ

ಏನು ಬೇಕಾದರೂ ನುಂಗಿಕೊಂಡಾಳು ಹೆಂಡತಿಯೆಂಬುವಳು
ತೀರಾ ನಡೆಯಲ್ಲ ಎನ್ನುವಾಗ ಸವತಿಯನ್ನೂ
ಆದರೀ ಹೆಬ್ಬುಬ್ಬೆಗೆ ಬಿದ್ದ ಗಂಡ
ಊರ ದನ ಕಾದು ಹೊತ್ತಿಳಿಯುವ ತನಕ
ಕೈಯಲ್ಲಾಡಿಸಿಕೊಂಡು ಬಂದರೆ ದೀಪ ಹಚ್ಚುವ ಹೊತ್ತಿಗೆ
ನಿಂತ ನಿಲುವಿಗೆ ಸೀಮೆಯೆಣ್ಣೆ ಸುರಿದು
ಇಲ್ಲ ಈ  ಸೂರಾಧಿಸೂರನಿಗೆ ಗೀರಬೇಕು
ಇಲ್ಲ ತನಗೇ ಗೀರಿಟ್ಟುಕೊಳ್ಳಬೇಕು

ಅಷ್ಟಲ್ಲದೆ ಹಾರಿಕೊಂಡಳೇ ಆ ತಾಯಿ ಅಗ್ನಿಗೊಂಡಕ್ಕೆ
ಅಪ್ಪ ಕರೆಯಲಿಲ್ಲ ಅಮ್ಮ ಇಳುಹಲಿಲ್ಲ
ವೆಂಬುದೆಲ್ಲ ಸುಮ್ಮನೆ  ಕೇರಿಯ ಬಾಯ್ತುರಿಕೆಗೆ
ಖುದ್ದು ವಿಷಯವಳು ರೋಸಿದ್ದಳು
ಗಂಡನೆಂಬ ಒಳಜ್ವರಕ್ಕೆ
ಇದ್ದರೂ ಇಳಿದರೂ ಮೈಹಿಂಡುವ ಜಡ್ಡಿಗೆ

ಊರವರಿಗೆಲ್ಲ ಬೇಡಾದದ್ದು ಇವನ ಹ್ಞೆ ಹ್ಞೆ ಹ್ಞೆ ಗೆ
ಬುದಬುದ ಗರಳವುಕ್ಕಿದರೆ ತಂದಿಳುಹಿರಿ ಇವನ ಗಂಟಲಿಗೆ
ಚಟಪಟ ಕೊಳ್ಳಿ ಚಿಟಗುಟ್ಟಿದರೆ ಅದರ ಕೆಂಡ ಇವನ ಮುಕ್ಕಣ್ಣಿಗೆ
ಯಾವನೊ ಹಲ್ಲಂಡೆ ಊರಕೆರೆ ತುಂಬೆತ್ತಿದರೆ ತಿರುವಿರಿ ಇವನ ಮಂಡೆಗೆ
ಕುಳವಿಳಿಯದ ಮಂಜುಗೆಡ್ಡೆ ನೊಗಕೊಸರುವ ಗೂಳಿ ಮುಫತ್ತು ಇವನಿವನಿಗೇ
ಮದುವೆಗೋ ಒಸಗೆಗೋ ಜಾಣತನವಾಗಿ ಇವರ ಮನೆಮರೆತು
ಸರುಹೊತ್ತಾದರೂ ಬಾ, ಸತ್ತಮನೆ ಹೆಣ ಎತ್ತು
ನಾಲ್ಕೊಳ್ಳೆಯ ಮಾತಾಡಿದರೆ ಉಟ್ಟ ಪಂಚೆ ಸುಲಕೊಟ್ಟು
ಕಟ್ಟಿಕೊಂಡ ಹೆಂಡಿರನ್ನು ತೂಕಕ್ಕೆ ಹಾಕು
ಪಾಪ, ಅದೆಷ್ಟು ಕುದ್ದಳೊ ಒಳಗೊಳಗೆ ಗೌರಮ್ಮ
ನೆಟ್ಟಗೆ ಹೋಗಿ ಹುಟ್ಟಿದ ಮನೆ ಒಲೆಗೆ ಸಮಿಧೆಯಾಗಿಬಿಟ್ಟಳು
ಏನೋ ದೇವನಾಗರಿಯಲ್ಲಿರುವದರಿಂದ ದೇವೀಮಹಾತ್ಮೆಯೆಂಬ ದೊಡ್ಡ ಹೆಸರು



೨
ಈ ಹೆಬ್ಬುಬ್ಬಯ್ಯನಿಗೆ ಬೇಕಾಗಿದ್ದೂ ಅದೇ
ಎದ್ದುಬಿಟ್ಟ ಭಂಗೀಮಾಮ ಊರೂರಮೇಲೆ
ಹೆಂಡಿರ ಶವದ ಮುಂದೆರಡು ದಿನ ಮೊಣಕಾಲ ಜಂಘೆ ಝುಣಗುಟ್ಟಿಸಿಕೊಂಡು
ನಾಟ್ಯವಾಡಿದ ಅಣ್ಣೊಂಟಿಗಾರ
ಘೇರಿ ಕಿತ್ತ ಕ್ರಿಯಾಸಮಾಧೀ ಮೇಲೊಂದು ತುಂಬೆ ಗಿಡ ನೆಡುವ
ಪುರಸೊತ್ತಿಲ್ಲದೆ
ಜೊತೆಗಿತ್ತಲ್ಲ ಕರದ ಕಪ್ಪರ ಚಪ್ಪನ್ನೈವತ್ತು ಸೀಮೆ ಜಾಗೀರು

ಅಷ್ಟಕ್ಕೆ ಬಿಟ್ಟಿದ್ದರೆ ಅಯ್ಯನ
ನಷ್ಟವೇನೇನೂ ಇರಲಿಲ್ಲವಾದರೂ ಬಿಡಲಿಲ್ಲ ಪ್ರಜಾಜನರು
ಒಂದು ಕೈ ಬೇಕಿತ್ತಲ್ಲ ಆಗಾಗ ಪುಗಸಟ್ಟೆಗೆ ಬಸಿರಾಗಲು

ಹೆಂಗೊ ತಲಾಷು ಮಾಡಿ
ತಪಸ್ಸಿನ ಕಾವು ಇಲಾಜು ಮಾಡಿ
ಕಟ್ಟಿದರು ಅಯ್ಯನಿಗೆ ಎರಡನೇ ಕುಟುಂಬ
ಅವಳೇ ಮಾರಮ್ಮ!

೩
ಅವಳೇ ಮಾರಮ್ಮ
ನೀವು ಶಕ್ತಿಯೆನ್ನಿ ಗಿಕ್ತಿಯೆನ್ನಿ
ಕಣ್ಣು ಮೂಗಿಗೊಂದೊಂದು ಪುರಾಣ ನಾಮ ಚೂಡಾಮಣಿ ರಚಿಸಿ
ಅಚ್ಚಗನ್ನಡದಲ್ಲಿ ನಮಗವಳು
ಊರ ಮಾರಮ್ಮ!!

ಉಂಡು ತೇಗಿದ್ದೇ ಘರ್ಜನೆ ಹೊದ್ದು ಮಲಗಿದ್ದೆ ರಾಜ್ಯಭಾರ
ವೆಂದು ಕೊಂಡಿದ್ದ ಹುಲಿರಾಯನ ಕುಂಡೆಗೆ ಬರೆ ಕಾಸಿದವಳು
ಹೆಬ್ಬುಬ್ಬೆ ಗಂಡೇಶ್ವರನನು ನುಣ್ಣಗೆ ಮಿದ್ದು ಹುದ್ದೆಗೆ ಗದುಮಿದವಳು
ಕದಲಿದ್ದ ಜಂತೆ ಕೈಯಾಡಿ ತೂತುಮಾಳಿಗೆ ಮೆತ್ತಿ ನಿಲ್ಲಿಸಿದವಳು
ಹೊಟ್ಟೆ ಮಕ್ಕಳ ಕೊಂಡಾಡದೆ ಕೆಂಗಣ್ಣು ಕಾವಲಿಗಿಟ್ಟು ದಿಡ್ಡಿಗೇ ಕುಂತವಳು
ಮುಖಕ್ಕೆ ಸೆರಗಿಕ್ಕಿ ಸಿಂಬಳಹುಳ ಬುಳಗುಟ್ಟಿಸುವೆ ಸತೀ ಶಿರೋಮಣಿ
ಪಟ್ಟ ವಾರೆಗಿಟ್ಟು ಒರೆಯಿಂದ ಅಲಗನೆತ್ತೆತ್ತಿ ಕತ್ತು ಕುಯ್ಯುವವಳು

ಇವಳೇ ಮಾರಮ್ಮ
ಇವಳೇ ಮಾರಮ್ಮ
ಎಲ್ಲೆಲ್ಲಿ ಗಂಡು ತಾರಾತಿಗಡಿ
ಅಲ್ಲೆಲ್ಲ ಹೆಣ್ಣು ಊರಮಾರಮ್ಮ

ಧಕ್ಕುಣಕುಣ ಕಣಕಣಚುಕಣ ಧಕ್ಕಣಕುಣ ಕಣಕಣ
ಕುವ್ವಾಕುವ್ವಾಕುವ್ವಾ ಕುವ್ವಾ ಕುವ್ವಾ ಕುವ್ವಾ ಕುವ್ವಾ ಕುವ್ವಾ ಕುವ್ವಾ



*ಚಿತ್ರ ಕೃಪೆ : ಕೃಷ್ಣ ರಾಯಚೂರು*

## ದಯವಿಟ್ಟು ಬನ್ನಿ

ಇಳಾ ಪ್ರಕಾಶನವು ಪ್ರಕಟಿಸುತ್ತಿರುವ **ಡಾ॥ ಬಿ.ಎನ್. ಸುಮಿತ್ರಾಬಾಯಿ** ಅವರ
**'ಸರಹದ್ದುಗಳ ಆಚೆ–ಈಚೆ'**
ವಿಮರ್ಶಾ ಕೃತಿಯ ಅನಾವರಣ ಕಾರ್ಯಕ್ರಮವನ್ನು 'ಮಾನಸ ಬಳಗ'ದ ಸಹಯೋಗದಲ್ಲಿ ಆಯೋಜಿಸಲಾಗಿದೆ.

**ಪ್ರೊ. ಎಂ.ಎಚ್. ಕೃಷ್ಣಯ್ಯನವರ** ಅಧ್ಯಕ್ಷತೆಯಲ್ಲಿ, ಕೃತಿ ಕುರಿತು **ಡಾ॥ ವನಮಾಲಾ ವಿಶ್ವನಾಥ್** ಮಾತನಾಡುತ್ತಾರೆ.

ಅದೇ ದಿನ ಕಲಾವಿದೆ ಶ್ರೀಮತಿ ಸೀತಾಕೋಟೆಯವರು ಖ್ಯಾತ ಲೇಖಕಿ ಶ್ರೀಮತಿ ವೈದೇಹಿಯವರ ಕೃತಿಯನ್ನು ಆಧರಿಸಿದ **'ಅಲೆಗಳಲ್ಲಿ ಅಂತರಂಗ'** ನಾಟಕದ ಏಕವ್ಯಕ್ತಿ ಪ್ರಸ್ತುತಿಯನ್ನು ಪ್ರದರ್ಶಿಸುತ್ತಿದ್ದಾರೆ.

**17, ಜುಲೈ 2009, ಶುಕ್ರವಾರ**

**ನಯನ ಸಭಾಂಗಣ**
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು – 560 002
**ಸಂಜೆ 5 ಗಂಟೆಗೆ.**

ಈ ಸಮಾರಂಭದಲ್ಲಿ ತಾವು, ತಮ್ಮ ಬಳಗ ಹಾಗೂ ಸ್ನೇಹಿತರು ಭಾಗವಹಿಸಬೇಕಾಗಿ ಪ್ರಾರ್ಥನೆ.

● *ಮಾನಸ ಬಳಗ*




*ಪ್ರಶಸ್ತಿಗಳು, ಡಾಕ್ಟರೇಟ್, ಮತ್ತೀಗ ರಂಗಾಯಣದ ನಿರ್ದೇಶಕಿಯಾಗುವ ಗೌರವ ಈ ಎಲ್ಲ ಹಿನ್ನೆಲೆಯಲ್ಲಿ ಬಿ. ಜಯಶ್ರೀ ಅವರಿಗೆ ಅಭಿನಂದಿಸುತ್ತಾ, ಒಂದು ಪುಟ್ಟ ಲೇಖನದ ಕಾಣಿಕೆ.* –ಸಂ.

**ಡಾ.** ಬಿ.ಜಯಶ್ರೀ ಅವರು ರಂಗಾಯಣದ ನಿರ್ದೇಶಕರಾಗಿ ನೇಮಕಗೊಂಡಿದ್ದಾರೆ. ಕಾರಂತರು, ಪ್ರಸನ್ನ, ಬಸವಲಿಂಗಯ್ಯ, ಜಂಬೆ ಹೀಗೆ ಕನ್ನಡದ ಪ್ರಮುಖ ರಂಗಕರ್ಮಿಗಳ ಸಾಲಿಗೆ ಸೇರುವ ಇವರು ರಂಗಾಯಣಕ್ಕೆ ನೇಮಕಗೊಂಡ ಮೊದಲ ಮಹಿಳಾ ನಿರ್ದೇಶಕರಾಗಿದ್ದಾರೆ. ರಂಗಕರ್ಮಕ್ಕೆ ಹೊಸ ಆಯಾಮವನ್ನು ನೀಡಬಲ್ಲ ಎಲ್ಲ ಸಾಧ್ಯತೆಗಳನ್ನೂ ಮೈಗೂಡಿಸಿಕೊಂಡಿರುವ ಜಯಶ್ರೀಯವರಿಗೆ ಅಭಿನಂದನೆಗಳು.

ಕನ್ನಡ ಸಾಂಸ್ಕೃತಿಕ ಸಂದರ್ಭ ತನ್ನ ಸಾಂಪ್ರದಾಯಿಕತೆಯನ್ನು, ಮಡಿವಂತಿಕೆಯನ್ನು ಬಿಟ್ಟು ಹೊಸತನ್ನೆಲ್ಲ ಆಲಂಗಿಸಿಕೊಂಡು, ಹೊಸ ಆಯಾಮಗಳಲ್ಲಿ ತೊಡಗಿಸಿಕೊಳ್ಳುತ್ತಿದೆ. ಜನಸಾಮಾನ್ಯರನ್ನೊಳಗೊಳ್ಳುವ ಟ್ರೆಂಡ್ ಪುನಃ ಪ್ರವೇಶ ಮಾಡುತ್ತಿದೆ. ಸಂಗೀತವಿರಬಹುದು, ದೃಶ್ಯಕಲೆಗಳಿರಬಹುದು, ಸ್ವಲ್ಪ ಮಟ್ಟಿಗೆ ಸಾಹಿತ್ಯವೂ ಸೇರಿದಂತೆ ನಾವು ಕಾಣುವ, ಕೇಳುವ ವಲಯಗಳಲ್ಲೂ ಬದಲಾವಣೆಗಳು ಕಂಡುಬರುತ್ತಿವೆ. ಕಲೆಯ ಶ್ರೇಷ್ಠತೆಯನ್ನು ಕುರಿತ ವಾಗ್ವಾದಗಳು ಹಳಸುತ್ತ ಎಲ್ಲತರಲ್ಲು ಕಲೆಯನ್ನು ಕಾಣುವ, ಎಲ್ಲವನ್ನೂ/ಎಲ್ಲರನ್ನೂ ಒಳಗೊಂಡು ಕಲೆಯನ್ನು ಕಟ್ಟುವ, ಹೊಸರೂಪ, ಹೊಸ ಆವಿಷ್ಕಾರದತ್ತ ಸಮಯ ಸಾಗುತ್ತಿದೆ.

ಈ ಹೊತ್ತಿನಲ್ಲಿ, ಈ ಹೊತ್ತಿಗನುಗುಣವಾಗಿ, ಅಂದರೆ, ಈ ಹೊತ್ತಿನ ಬೇಡಿಕೆಗಳಿಗನು ಗುಣವಾಗಿ ಕಲೆ ತನ್ನ ನಡಿಗೆಯನ್ನು ಬದಲಾಯಿಸಬೇಕಿದೆ. ಇಂಥ ಬದಲಾವಣೆಯ ಎಲ್ಲ ಘಟ್ಟಗಳಲ್ಲೂ ಹಳೆಯದೇ ಚಂದವಾಗಿತ್ತು ಹೊಸತರಲ್ಲಿ ಸೊಗಡಿಲ್ಲವೆಂದು ಗೋಳಾಡುವ ಅಳುಮುಂಜಿಗಳಿರುವ ಹಾಗೇ ಹೊಸತನ್ನು ಲವಲವಿಕೆಯಿಂದ ಬರಮಾಡಿಕೊಂಡು ಹೊಸ ಅಲೆಯ ಜೊತೆ ಹರಿದು ಮುನ್ನಡೆವವರೂ ಇರುತ್ತಾರೆ. ಈ ಎರಡನೇ ಪಂಗಡಕ್ಕೆ ಸೇರಿದವರು, ಬಿ.ಜಯಶ್ರೀ.

1950ರಲ್ಲಿ ಹುಟ್ಟಿದ ಜಯಶ್ರೀ ಅವರು **ಬಹು ಆಯಾಮಗಳುಳ್ಳ ಕಲಾವಿದರು** ಎಂಬುದು ಪ್ರಚಾರದಲ್ಲಿರುವ ಮಾತು. ಕನ್ನಡ ರಂಗಭೂಮಿಯ ಒಬ್ಬ ಶ್ರೇಷ್ಠ ಕಲಾವಿದೆಯಾಗಿ ಕಳೆದ 25 ವರ್ಷಗಳಿಂದ ಜಯಶ್ರೀ ನನಗೆ ಪರಿಚಯವಿದ್ದರೂ, ಇತ್ತೀಚಿನ ಅವರ ಮಾಸ್ ಪಾಪ್ಯುಲಾರಿಟಿಯ ಬಗ್ಗೆ ನನಗೆ ಕುತೂಹಲ. ಕನ್ನಡ ರಂಗಭೂಮಿ ಸಾಕಷ್ಟು ರಂಗಕರ್ಮಿಗಳನ್ನು ಹುಟ್ಟುಹಾಕಿದೆ. ಹೆಚ್ಚು ಕಡಿಮೆ ಎಲ್ಲರೂ ಬಹುಮುಖ ಪ್ರತಿಭೆಯನ್ನುಳ್ಳವರೇ. ಆದರೆ ತಮ್ಮ ಈ ಬಹುಮುಖ ಪ್ರತಿಭೆಯನ್ನು ರಂಗಭೂಮಿಗಷ್ಟೇ ಸೀಮಿತಗೊಳಿಸದೆ, ಅಲ್ಲಿಂದಾಚೆಗೂ ಅದರ ಚಮತ್ಕಾರವನ್ನು ಪಸರಿಸಿದ ವಿಶಿಷ್ಟ ಕಲಾವಿದೆ ಇವರು ಮಾತ್ರ, ಸಾಧ್ಯತೆಗಳನ್ನೂ ಮೀರಿ ಏಕೈಕವೆಂಬಂತೆ ಆವರಿಸಿಕೊಂಡಿರುವ ಟಿವಿ ಚಾನಲ್ಲುಗಳಿಂದ ಪ್ರಚಾರದ ವೇಗ ಇಮ್ಮಡಿಯಾಗಿದೆ. ಯಾವುದೇ ಪೂರ್ವಭಾವಿ ತಯಾರಿ ಇಲ್ಲದೇ ನಾಯಕ ನಾಯಕಿಯರು ಹಟಾತ್ತನೆ ಹುಟ್ಟುತ್ತಿದ್ದಾರೆ. ಈ ಪ್ರಬಲ ಮಾಧ್ಯಮಗಳನ್ನು ಹಳಿಯುವ ಬದಲು ಅದನ್ನೂ ಉಪಯೋಗಿಸಿಕೊಂಡು ಕಲಾವಿದರು ಜನ ಸಮೂಹವನ್ನು ತಲುಪುವ ಅವಶ್ಯಕತೆಯಿದೆ. ನಮ್ಮ ಸರಕಿನ (ಕಲೆಯ) ಗುಣಮಟ್ಟ ಉತ್ತಮವಿದ್ದಷ್ಟೂ ಮಾರುಕಟ್ಟೆಯಲ್ಲಿ ನಮ್ಮ ಉಳಿವು ದೀರ್ಘಕಾಲ ಇರುತ್ತದೆ. ಜೊತೆಗೆ ಜನ ಸಮೂಹವು ಒಮ್ಮೆ ಸ್ಟಾರ್ ಎಂದು ಒಪ್ಪಿಕೊಂಡರೆ ಸಾಕು, ಅನಂತರ ಅವರ ಎಲ್ಲ ಹೊಸ ಪ್ರಯತ್ನಗಳನ್ನೂ ಸ್ವೀಕರಿಸುವ ಸಹೃದಯತೆಯನ್ನು ಬೆಳೆಸಿಕೊಳ್ಳುತ್ತಾರೆ. ಜಯಶ್ರೀಯವರ ಟಿವಿ, ಸಿನೆಮ, ಹಾಡುಗಾರಿಕೆಯ ಜನಪ್ರಿಯತೆಯಿಂದಾಗಿ ಅವರ ರಂಗಕರ್ಮದ ಸರಹದ್ದು ಹೆಚ್ಚೆಚ್ಚು ವಿಸ್ತೀರ್ಣಗೊಂಡಿದೆ. ಕೇವಲ ರಂಗಾಸಕ್ತರನ್ನು ಮಾತ್ರ ಆಕರ್ಶಿಸುತ್ತಿದ್ದ ಅವರ ಪ್ರಯೋಗಗಳ ಪ್ರೇಕ್ಷಕಗಣಕ್ಕೆ ಜನಸಾಮಾನ್ಯರೂ ಸೇರಿಕೊಳ್ಳುತ್ತಿದ್ದಾರೆ.

'ಕಾರ್..ಕಾರ್..', 'ಚಕ್ಕೋತಾ.. ಚಕ್ಕೋತಾ..', ದಂತಹ ಹಿಟ್ ಸಿನೆಮಾ ಹಾಡುಗಳನ್ನು ಹಾಡಿ, ತಮ್ಮ ವಿಶಿಷ್ಟವಾದ ಧ್ವನಿಯನ್ನು ಕನ್ನಡನಾಡಿನ ಮೂಲೆ ಮೂಲೆಗೂ ಕೇಳಿಸಿರುವ ಜಯಶ್ರೀ ಸಿನೆಮಾ ಮತ್ತು ಟಿವಿ ಧಾರಾವಾಹಿಗಳಲ್ಲಿಯೂ ನಟಿಸಿ ಜನಸಾಮಾನ್ಯರ ನಡುವೆ ಬಹುಮುಖ್ಯ "ಐಕಾನ್" ಆಗಿಬಿಟ್ಟಿದ್ದಾರೆ. ಒಂದು ವರ್ಷದ ಹಿಂದೆ ಹೊಸ ವರ್ಷವನ್ನಾಚರಿಸುವುದಕ್ಕಾಗಿ ನಾನೂ ಅವರೊಟ್ಟಿಗೆ ಗುಬ್ಬಿಗೆ ಹೋಗಿದ್ದೆ. ಬೆಂಗಳೂರಿಗೆ ಹಿಂದಿರುಗಿ ಬರುತ್ತಿದ್ದೆವು. ನ್ಯೂಯಿಯರ್ ಸೆಲೆಬ್ರೇಷನ್ ಮುಗಿಸಿ ಎಲ್ಲೆಲ್ಲಿಂದಲೋ ಬೆಂಗಳೂರಿಗೆ ಸಾಲು ಸಾಲು ವಾಹನಗಳು ಬರುತ್ತಿದ್ದವು. ಕಡೇಪಕ್ಷ ಐದಾರು ಗಾಡಿಗಳವರಾದರೂ ಜಯಶ್ರೀಯವರನ್ನು ನೋಡುವದಕ್ಕಾಗೋ, ಅವರೊಂದಿಗೆ ಮಾತಾಡುವುದಕ್ಕಾಗೋ ನಮ್ಮನ್ನು ಓವರ್ಟೇಕ್ ಮಾಡಿಕೊಂಡು ಬಂದದ್ದಿದೆ. ಎದುರಿಂದ ಹೊಟ್ಟೆ ತುಂಬಿಕೊಂಡು ಒಂದು ಮೆಟೆಡರ್ ಬರುತ್ತಿತ್ತು. ಕಿಟಕಿಯಿಂದ ಹಣಕಿಹಾಕುತ್ತಿದ್ದ ಹೆಂಗಸರು, ಮಕ್ಕಳು, ಅರೆತೆರೆದ ಬಾಗಿಲಿಂದ ಜೋತುಬಿದ್ದ ಪಡ್ಡೆ ಹುಡುಗರು ಹೀಗೆ ಯಾವುದೋ ಕ್ಯಾರಿಕೇಚರಿನಹಾಗಿದ್ದ ಈ ಮೆಟೆಡರ್ ಝರ್ರನೆ ಹಾದು ಹೋಯ್ತು. ನಮ್ಮ ಗಾಡಿ ಬರುತ್ತಲೇ ಒಳಗಿದ್ದವರೆಲ್ಲ ಹೋ! ಎಂದು ಕೂಗಿಕೊಂಡರು. ಸ್ವಲ್ಪ ಹೊತ್ತಿಗೆಲ್ಲ ಈ ಮೆಟೆಡರ್ ರಿವರ್ಸ್ ಆಗಿ ನಮ್ಮನ್ನು ಓವರ್ಟೇಕ್ ಮಾಡಿಕೊಂಡು ನಮ್ಮ ಗಾಡಿಯ ಮುಂದೆ ನಿಂತಾಗ ನಾವೂ ಗಾಡಿಯನ್ನು ನಿಲ್ಲಿಸಿದೆವು. ಅದರೊಳಗಿಂದಿಳಿದವರು ಜಯಶ್ರೀಯನ್ನು ನೋಡಿ ಅವರೊಂದಿಗೆ ಮಾತಾಡುವುದಕ್ಕಾಗೇ ತಿರುಗಿ ಬಂದವರು. ಯಾವುದೋ ದೂರದೂರಿಂದ ಬಂದ ದಂಡು ಇದು.

ಜನಸಾಮನ್ಯರ ಮೇಲೆ ಅಚ್ಚರಿ ಗೊಳಿಸುವಂಥ ಪ್ರಭಾವ ಬೀರಿರುವ ಕೆಲವರಲ್ಲಿ ಜಯಶ್ರೀ ಪ್ರಮುಖರು. ಈ ಎಲ್ಲರಿಗೂ ಜಯಶ್ರೀಯ ರಂಗ ಹಿನ್ನೆಲೆ ಮುಖ್ಯವಲ್ಲ, ಗಾಯನ ಮುಖ್ಯ. ಜನಕ್ಕೆ ಅವರು 'ನಾಗಮಂಡಲ'ದ ಕುರುಡವ್ವನಾಗಿ ಕಾಣುತ್ತಾರೆ. 'ಪ್ರೀತಿಯಿಲ್ಲದಮೇಲೆ' ಸೀರಿಯಲ್ಲಿನ ಅವರ ಪಾತ್ರ ಮುಖ್ಯವಾಗುತ್ತದೆ, ಅಥವ ಅವರು ನಟಿಸಿದ ಸಿನೆಮಾದ ಸಂಧರ್ಭ ಮುಖ್ಯವಾಗುತ್ತದೆ.

ರಂಗ ಗೀತೆಗಳನ್ನು ಹೊಸದೊಂದು ವಿಶಿಷ್ಟ ಕಲಾಮಾಧ್ಯಮವಾಗಿ ಜನಜನಿತ ಮಾಡುತ್ತಿರುವ ಕೆಲವರಲ್ಲಿ ಜಯಶ್ರೀ ಪ್ರಮುಖರು. ಮರಾಠಿಯಲ್ಲಿ 'ನಾಟ್ಯ ಸಂಗೀತ್' ಎಂಬ ಹೆಸರಿಂದ ಪ್ರಚಾರದಲ್ಲಿದ್ದ ಸಂಗೀತಕ್ಕಿಂತ ಭಿನ್ನವಾಗಿ ಕನ್ನಡ ರಂಗಗೀತೆಗಳ ಪ್ರಕಾರ ಹುಟ್ಟಿಕೊಂಡರೂ ಸಹ, ಅಂಥದೇ ಉದ್ದೇಶವಿದ್ದ ಈ ಪ್ರಕಾರವನ್ನು 'ರಂಗ ಸಂಗೀತ'ವೆಂದು ಬಿ.ವಿ.ಕಾರಂತರು ಕರೆದರು. "ಇಲ್ಲಿ ಎಲ್ಲ ರಸಗಳೂ 'ಗೋಚರವಾಗುತ್ತವೆ'. ಸಾಹಿತ್ಯದ ಅರ್ಥಗಳನ್ನು ಇಲ್ಲಿ 'ಕಾಣ'ಬಹುದು." ಅನ್ನುವ ಜಯಶ್ರೀಯ ಮಾತುಗಳು; ಕನ್ನಡದಲ್ಲಿ ಇನ್ನೂ ಪ್ರಚಾರಕ್ಕೆ ಬಾರದ ಪರ್ಫಾರ್ಮೆನ್ಸ್ ಪೊಯೆಟ್ರಿಯ ಸ್ಪಷ್ಟವಾದ ಜಾಡನ್ನು ನನ್ನ ಗಮನಕ್ಕೆ ತರುತ್ತದೆ. ಕಂಬಾರರ ಕವಿತೆಯನ್ನೋ, ಎಚ್.ಎಸ್.ವಿ ಅವರ ಕವಿತೆಯನ್ನೋ ರಂಗದ ಮೇಲೆ ತಂದಾಗ ಅದು ಆ


ಗಿರಿಜಾ ಕಲ್ಯಾಣ ನಾಟಕದಲ್ಲಿ



ಕವಿತೆಯ ದೃಶ್ಯಪಠ್ಯವಾಗಿ (visual text) ನಮ್ಮೆದುರಿಗೆ ಮೂಡುತ್ತಾ ಕವಿತೆಯಾಗಿ ಅದಕ್ಕಿದ್ದದ್ದಕ್ಕಿಂತ ಬೇರೆಯೇ ಆದ, ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತದೆ. ಹೀಗೆ ರಂಗಗೀತೆಗಳನ್ನು ನಿರೂಪಣೆ ಮಾಡುವವರು ಈ ಪ್ರಕ್ರಿಯೆಯ ಸಾಧ್ಯತೆಗೆ ತುಂಬ ಮುಖ್ಯವಾಗುತ್ತಾರೆ. ನಾನು ಗಮನಿಸಿರುವ ಹಾಗೆ ಇಂಥ ಆನಿಮೇಟರಿ ಸ್ಕಿಲ್ಸ್ ಜಯಶ್ರೀಯಲ್ಲಿ ಬಹಳ ಪ್ರಬಲವಾಗಿ ಕಂಡುಬರುತ್ತದೆ. ಸಾಮಾನ್ಯವಾಗಿ ಮಾತಾಡುವ ಸಂದರ್ಭದಲ್ಲೂ ಸಹ, ಅವರು ಬೇರಾರೋ ಹೇಳಿದ್ದನ್ನ, ಡೈಲಾಗ್ ರೂಪದಲ್ಲಿ ಆ ಹೇಳಿದವರ ಹಾವ ಭಾವ ಧ್ವನಿಗಳನ್ನೊಡಗೂಡಿ ಹೇಳುತ್ತಾರೆ.

ತಮ್ಮ ವಿಶೇಷವಾದ ಧ್ವನಿಗೆಂದೇ ಹೆಸರುವಾಸಿಯಾಗಿರುವ ಜಯಶ್ರೀಯವರಿಗೆ ಪ್ರಿಯವಾದ್ದು ಪುರಂದರ ದಾಸರ ಕೀರ್ತನೆಗಳು. ಸಿನೆಮ ಹಾಡಾಗಲಿ, ಯಾವುದೇ ಕಮರ್ಷಿಯಲ್ ಹಾಡಾಗಲಿ ಅದರ ಸಾಹಿತ್ಯ ಇಷ್ಟವಾದರೆ ಮಾತ್ರ ಹಾಡಲು ಒಪ್ಪುತ್ತಾರೆ ಜಯಶ್ರೀ. ತಾವು ಹಾಡಿರುವ ಹಾಡುಗಳಲ್ಲಿ 'ಬಿದಿರು.. ನಾನಾರಿಗಲ್ಲಾದವಳು..' ಎಂಬ ಶರೀಫರ ಹಾಡು ಇವರಿಗೆ ಪ್ರಿಯವಾದ್ದು. "ಇಲ್ಲಿ ಬಿದಿರಿನ ದೊಡ್ಡತನ ನನಗೆ ಕಾಣತ್ತೆ. ನಾನು ಸಾಹಿತ್ಯಕ್ಕೆ ಪರಕಾಯ ಪ್ರವೇಶ ಮಾಡ್ತೀನಿ" ಅನ್ನುತ್ತಾರೆ ಜಯಶ್ರೀ. 'ಹೆಂಗಸರ ಹಕ್ಕಿನ ಸಂಘ' ಪ್ರಕಟಿಸಿರುವ "ಬಾಗಿಲು... ಬಾಗಿಲು" ಹಾಡೂ ಇವರಿಗೆ ಪ್ರಿಯವಾದ್ದು. ಇದಕ್ಕೆ ಸುಮತಿ ರಾಗಸಂಯೋಜನೆ ಮಾಡಿದ್ದಾರೆ. ಜಯಶ್ರೀ ಅಭಿನಯಿಸಿ, ನಿರ್ದೇಶಿಸಿರುವ ಹೆಚ್.ಎಸ್.ವೆಂಕಟೇಶ ಮೂರ್ತಿಯವರ 'ಮಂಥರ' ನಾಟಕಕ್ಕೆ ಸುಮತಿಯವರು ರಾಗಸಂಯೋಜನೆ ಮಾಡಿದ್ದಾರೆ. ಈ ನಾಟಕದ 'ಮೋಡಾ ಒಡೆದು..' ಕೂಡ ಇವರಿಗೆ ಇಷ್ಟವಾದ ಹಾಡು. ಎಚ್.ಎಸ್.ವಿ ಅವರ 'ಚಿತ್ರಪಟ ರಾಮಾಯಣ' ಜಯಶ್ರೀ ಅಭಿನಯಿಸಿ, ನಿರ್ದೇಶಿಸಿರುವ ಮತ್ತೊಂದು ಅದ್ಭುತವಾದ ನಾಟಕ. ಈ ನಾಟಕಕ್ಕೆ ಅಂಜನಾ ಪುರಿ ಅವರು ರಾಗಸಂಯೋಜನೆ ಮಾಡಿರುವ ಹಾಡುಗಳನ್ನೂ ಜಯಶ್ರೀ ಮೆಚ್ಚುತ್ತಾರೆ. ಇನ್ನು, 'ಅಮೇರಿಕ ಅಮೇರಿಕ' ಎಂಬ ಯುದ್ಧವಿರೋಧಿ ಗೀತೆಯ ವಿಡಿಯೋ ಆಲ್ಬಮ್ಮಿಗೆ 'ಸುರಾಂಗನಿ ಸುರಾಂಗನಿ..' ಹಾಡಿನ ಧಾಟಿಯಲ್ಲಿ ಜಯಶ್ರೀ ವಿಶೇಷವಾಗಿ ಹಾಡಿದ್ದಾರೆ. ಪಿ.ಕಾಳಿಂಗರಾವ್ ಅವರ ಗೀತೆಗಳನ್ನು ಚಿಕ್ಕಮಗಳೂರಲ್ಲಿ ಹಾಡಿ ಅಲ್ಲಿಯ


ಮಂಥರೆ ನಾಟಕದಲ್ಲಿ

ಜನರ ಮನದ ತುಂಬ ಜಯಶ್ರೀ ನೆಲೆಸಿಬಿಟ್ಟಿದ್ದಾರೆ. ಜಯಶ್ರೀಯವರ ತಂಡ ಇತ್ತೀಚೆಗೆ ಕಬ್ಬನ್‌ಪಾರ್ಕಿನ ಬ್ಯಾಂಡ್‌ಸ್ಟ್ಯಾಂಡಿನಲ್ಲಿ ರಂಗಗೀತೆಗಳನ್ನು ಹಾಡಿ ಬೆಂಗಳೂರಿನ ಜನಸಾಮಾನ್ಯರನ್ನು ನಾಸ್ಟಾಲ್ಜಿಕ್ ಮಾಡಿತು.

ಬದಲಾಗುತ್ತಿರುವ ಸಂಗೀತ-ಸಂಸ್ಕೃತಿಯ ವಿವಿಧ ಆಯಾಮಗಳಲ್ಲಿ ನಿರ್ಭಿಡೆಯಿಂದ ತಮ್ಮನ್ನು ತೊಡಗಿಸಿಕೊಳ್ಳುತ್ತಾ ಬಂದಿರುವ ಬಿ.ಜಯಶ್ರೀ ಅವರಿಗೆ "ಪಾಪ್ ಮ್ಯೂಸಿಕ್ 'ನಮ್ಮ ಸಂಸ್ಕೃತಿ' ಅಲ್ಲ" ಅನ್ನುವ ನಿರ್ದಿಷ್ಟ ನಿಲುವು. ಟ್ರಾನ್ಸ್ ಜೆಂಡರ್ ಗುಂಪುಗಳ, ಸೆಕ್ಸ್ ವರ್ಕರ್ಸ್‌ಗಳ ಹಾಗು ಅನಾಥ ಮಕ್ಕಳ ಜೀವನೋದ್ಧಾರಕ್ಕಾಗಿ ಚಂದಾ ಎತ್ತಲೆಂದು ಹಮ್ಮಿಕೊಂಡ ಸಂಗೀತ ಕಾರ್ಯಕ್ರಮಗಳಲ್ಲಿ ಉಚಿತವಾಗಿ ಅಥವ ತೀರ ಕಡಿಮೆ ಹಣ ಪಡೆದು ಹಾಡಿ, ಸಾಮಾಜಿಕವಾಗಿ ಅಂಚಿಗೆ ತಳ್ಳಲಾದ ಇಂಥ ಗುಂಪುಗಳಿಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

ಬಿ.ಜಯಶ್ರೀಯವರ ರಂಗ ಅಸ್ಮಿತೆಯು ಕನ್ನಡ ನಾಟಕಗಳದ್ದೆಂದು ಹೇಳಿ ಮುಗಿಸಲಾಗದು. ಅದು ವಿಶೇಷವಾಗಿ ಗುಬ್ಬಿ ಕಂಪನಿಯ ಹಿನ್ನೆಲೆಯುಳ್ಳದ್ದು ಮತ್ತು ಅದಕ್ಕಿಂತ ಹೆಚ್ಚಾಗಿ ಎನ್.ಎಸ್.ಡಿ ಯ ತಾಲೀಮಿನ ಹಿನ್ನೆಲೆಯಲ್ಲಿ ವೈಯಕ್ತಿಕವಾಗಿ ರೂಢಿಸಿಕೊಂಡ ವಿಶೇಷ ಛಾಪನ್ನು ಉಳ್ಳದ್ದೂ ಆಗಿದೆ. ಆನಂದರಾಜು ಆರಂಭಿಸಿದ 'ಸ್ಪಂದನ' ನಾಟಕ ತಂಡದ ಜೊತೆಗೆ ಜಯಶ್ರೀ ತಮ್ಮನ್ನು ಸಮೀಕರಿಸಿಕೊಂಡಿದ್ದಾರೆ. ಬಿ.ಜಯಶ್ರೀಯವರ ಈ ತಂಡಕ್ಕೀಗ 33 ವರ್ಷ. ನಟಿ-ನಿರ್ದೇಶಕಿಯಾಗಿ ತಂಡದ ಜೊತೆ ಹಲವಾರು ಕಲಾವಿದರನ್ನೂ ಬೆಳೆಸಿದ ಶ್ರೇಯಸ್ಸು ಇವರದ್ದು. "ನಾಟಕ ಒಂದು ಟೀಮ್ ವರ್ಕ್. ಅದರ ಸಕ್ಸಸ್ಸಿಗೆ ತಂಡದ ಕಲಾವಿದರೆಲ್ಲರ ಕೊಡುಗೆ ಇದ್ದೇ ಇರುತ್ತದೆ" ಎಂದು ಜಯಶ್ರೀ ಅಂದರೂ ಒಟ್ಟಾರೆಯಾಗಿ ಸ್ಪಂದನದ ನಾಟಕಗಳು ಇವರು ಕಟ್ಟುವ ಕಲಾಕೃತಿ ಅನ್ನುವುದರಲ್ಲಿ ಬೇರೆ ಮಾತಿಲ್ಲ. "ನನ್ನ ನಾಟಕಗಳಲ್ಲಿ (ಕಲಾಕೃತಿಯಲ್ಲಿ) ನಾನು ಮತ್ತೆ ಮತ್ತೆ ರಿಪೀಟ್ ಆಗಬಾರದು, ಹೊಸದಾಗಿ ಮೂಡಿ ಬರಬೇಕು. ನಾನು ನಿರ್ದೇಶಿಸಿದ ನಟರ ಕೆಲಸಗಳಲ್ಲಿ ಎಷ್ಟರಮಟ್ಟಿಗೆ ನನ್ನ ಪ್ರಯತ್ನ ಯಶಸ್ವಿಯಾಗಿ ಮೂಡಿ ಬರುತ್ತದೆ ಅನ್ನುವುದು ನನಗೆ ಮುಖ್ಯ" ಅನ್ನುತ್ತಾರೆ. "ರೀಪ್ರೊಡ್ಯೂಸ್ ಮಾಡುವುದಕ್ಕಿಂತ ರೀಕ್ರಿಯೇಟ್ ಮಾಡುವುದರಲ್ಲಿ ನನಗೆ ಹೆಚ್ಚು ಆಸಕ್ತಿ." ಈ ಮಾತು ಜಯಶ್ರೀಯವರ ಕೆಲಸದ ಸ್ವರೂಪವನ್ನು ನಮ್ಮೆದುರಿಗಿಡುತ್ತದೆ.

ರಂಗಶಂಕರದ ರಂಗಹಬ್ಬಕ್ಕಾಗಿ ತಾತ ಗುಬ್ಬಿ ವೀರಣ್ಣನವರ ಖ್ಯಾತ ನಾಟಕ 'ಸದಾರಮೆ'ಯನ್ನು ನಿರ್ದೇಶಿಸಿ, ವೀರಣ್ಣನವರು ವಹಿಸುತ್ತಿದ್ದ ಕಳ್ಳನ ಪಾತ್ರವನ್ನು ಅದ್ಭುತವಾಗಿ ನಿಭಾಯಿಸಿದರು. ಮೊದಲ ಶೋ ನಂತರ ಮುಂದಿನ ಸಾಲಲ್ಲಿ ಕುಳಿತಿದ್ದ ಅವರ ತಾಯಿ ಮಾಲತಮ್ಮ ತಮ್ಮ ಕಣ್ಣಲ್ಲಿಯ ಆನಂದಭಾಷ್ಪವನ್ನು ಒರೆಸಿಕೊಳ್ಳುತ್ತಾ, "ಥೇಟು ನಮ್ಮಪ್ಪನ್ನೇ ರಂಗದ ಮೇಲೆ ನೋಡಿದ ಹಾಗಾಯ್ತು" ಎಂದು ಜಯಶ್ರೀಯನ್ನು ಹರಸಿದ್ದರು. ಬಿ.ಸುರೇಶ ಅವರ 'ಗಿರಿಜಾ ಕಲ್ಯಾಣ' ಇತ್ತೀಚಿನ ಇವರ ಮತ್ತೊಂದು ನಾಟಕ.

ಮಹಿಳಾ ಪ್ರತಿನಿಧೀಕರಣದ ಹೊಸ ಆಯಾಮಗಳಿಗೂ ಮತ್ತು ಈ ಪ್ರತಿನಿಧೀಕರಣದ ಸಾಂಪ್ರದಾಯಿಕ ಚರ್ಚೆಗಳಿಗೂ ನಡುವಿನ ಸಂವಾದದ ಹಾಗೆ ಜಯಶ್ರೀಯವರ ರಂಗಕರ್ಮ ಒಡಮೂಡಿದೆ. ಇವರ ಪ್ರಸಿದ್ಧ ನಾಟಕ 'ಲಕ್ಷಾಪತಿ ರಾಜನ ಕಥೆ'ಯಿಂದ ಏಕವ್ಯಕ್ತಿ ನಾಟಕವಾದ 'ಉರಿಯ ಉಯ್ಯಾಲೆ'ಯನ್ನು ಒಳಗೊಂಡು, 'ಚಿತ್ರಪಟ ರಾಮಾಯಣ'ವೂ ಸೇರಿದಹಾಗೆ ಇತ್ತೀಚಿನ 'ಸದಾರಮೆ' ಯವರೆಗೆ ಈ ಬೆಳವಣಿಗೆಯನ್ನು, ಅದಕ್ಕೆ ಬೇಕಾದ ಕೊಡು ಕೊಳ್ಳುವಿಕೆಯನ್ನು ಕಾಣಬಹುದು.

"ನಾನು ಬೆಳೆದದ್ದು ಥೇಟರ್‌ನಲ್ಲೇ. ನಮ್ಮಮ್ಮ ಚಾಪೆ ಹಾಸಿ ಆಡೋಕೆಂದೆರಡು ಕಲ್ಲುಗುಂಡನ್ನ ನನ್ನ ಮುಂದೆ ಉರುಳಿಸಿ ಬಿಡುತ್ತಿದ್ದರು. ಗೊಂಬೆಯನ್ನು ಕಂಡವಳೇ ಅಲ್ಲ ನಾನು", ಎಂದು ಬಾಲ್ಯವನ್ನು ನೆನೆಯುತ್ತಾರೆ ಜಯಶ್ರೀ. ಗುಬ್ಬಿ ಕಂಪನಿಯಲ್ಲಿದ್ದ ಬಾಬಣ್ಣ ಎಂಬುವವರು ತಮ್ಮ ಭುಜದಮೇಲೆ ಎತ್ತಿ ಆಡಿಸಿದರು, ಸೋದರ ಮಾವಂದಿರು ರಂಗಸ್ಥಳಕ್ಕೆ ಕರೆತಂದರು, ತಾತ ಗುಬ್ಬಿವೀರಣ್ಣ ಹಾಡಿಸುತ್ತಿದ್ದರು. ಮನೆ ಮಂದಿಯೆಲ್ಲ ನಾಟಕವಾಡುತ್ತಿದ್ದಕಾಲ ಅದು. ಎಲ್ಲ ಹೆಣ್ಣು ಮಕ್ಕಳಿಗೂ ಸುಂದರವಾಗಿ ಮೇಕಪ್ ಮಾಡಿ, ಜಯಶ್ರೀಗೆ ಮಾತ್ರ ದಪ್ಪನೆಯ ಹುಬ್ಬು ಬರೆದು ಕುರೂಪಿಯಂತೆ ಮೇಕಪ್ ಮಾಡಿ "ನೀನಿರುವುದೇ ಹಾಗೆ" ಅನ್ನುತ್ತಿದ್ದರಂತೆ ಪೋರಿಯ ಚಟುವಟಿಕೆ, ಪ್ರತಿಭೆ ಕಂಡು ಕರುಬುತ್ತಿದ್ದ ಕೆಲವರು. ಅಳುತ್ತಾ ಕೂರುತ್ತಿದ್ದ ಈ ಪುಟ್ಟ ಪೋರಿಗೆ ಚಿಕ್ಕಮ್ಮ ಲತಕ್ಕ ರಮಿಸುತ್ತಿದ್ದರಂತೆ. (ಕಲಾವಿದೆ ಲತಾ ಬಿ.ಜಯಮ್ಮನವರ ಮಗಳು) ತಿಂಡಿಗಳಲ್ಲಿ ಜಯಶ್ರೀಗೆ ಲಾಡು ತುಂಬಾ ಇಷ್ಟ. ಊಟದಲ್ಲಿ ತಿಳಿಸಾರು. ಆದರೆ "ಯಾರೂ ಯಾವತ್ತೂ ನಿನಗೇನು ಬೇಕು ಅಂತ ನನ್ನನ್ನ ಕೇಳಿಲ್ಲ" ಎನ್ನುತ್ತ ತಮ್ಮ ಬಾಲ್ಯವನ್ನು ಕಹಿಯಾಗಿ ನೆನೆಯುತ್ತಾರೆ ಜಯಶ್ರೀ. ಅವಿಭಕ್ತ ಕುಟುಂಬದಲ್ಲಿ ಬೆಳೆದ ಇವರಿಗೆ ತಮ್ಮ ತಟ್ಟೆಯಲ್ಲಿ ಬೀಳದ ತುಪ್ಪ ಬೇರೆ ಮಕ್ಕಳ ತಟ್ಟೆಯಲ್ಲಿ ಮಾತ್ರ ಬೀಳುತ್ತಿದ್ದದ್ದೂ ಗೊತ್ತಿತ್ತು. ಹುಡುಗಿಯಾದದ್ದಕ್ಕಾಗಿ, ಸರಿಯಾದ ಆರ್ಥಿಕ ಬೆಂಬಲ ಇಲ್ಲದ್ದಕ್ಕಾಗಿ, ಆಸರೆಯಾಗಿದ್ದ ತಾಯಿಯೇ ಮತ್ತೊಬ್ಬರ ಆಸರೆಯಲ್ಲಿದ್ದದ್ದಕ್ಕಾಗಿ ಸದಾ ಕೀಳರಿಮೆ, ಕುಹಕಗಳ ಮೊನಚು ಮಾತುಗಳ ತುತ್ತು ತಿಂದು ಬೆಳೆದ ನೋವು ಮಾಯದೆ ನೆನಪಾಗಿ ಉಳಿದಿದೆ.

"ನನ್ನ ಬದುಕಿನಲ್ಲಿ ದೊಡ್ಡ ಮಾರ್ಪಾಟನ್ನು ತಂದದ್ದು ಎನ್.ಎಸ್.ಡಿ.ಯಲ್ಲಿ ನಾನು ಕಳೆದ ದಿನಗಳು" ಎಂದು ನೆನೆಯುತ್ತಾರೆ ಜಯಶ್ರೀ. ವಿವಿಧಭಾಷೆ, ಪ್ರಾಂತ್ಯಗಳ ಹಿನ್ನೆಲೆಗಳಿಂದ ಬಂದ ಸಹಪಾಠಿಗಳ ಸಹವಾಸ ಹೆಚ್ಚಿನ ಆತ್ಮಸ್ಥೈರ್ಯವನ್ನು ತಂದುಕೊಟ್ಟಿತು. ರಜಾಕ್ಕೆಂದು ಬೆಂಗಳೂರಿಗೆ ಬಂದಾಗ ತಾತ ವೀರಣ್ಣನವರನ್ನು ಭೇಟಿಯಾಗಿ, ತಾನು ಜಯಶ್ರೀಯನ್ನು ಮದುವೆಯಾಗುವ ಕುರಿತು ಪ್ರಸ್ತಾಪ ಮಾಡಲೆಂದು ಸಹಪಾಠಿ, ಇಂದು ಪ್ರಸಿದ್ಧ ಚಿತ್ರ ಕಲಾವಿದರೂ ಆಗಿರುವ ಓಂಪುರಿ ಬಂದಿದ್ದರು. ಈ ವಿವಾಹಕ್ಕೆ ಒಪ್ಪಿಗೆ ದೊರಕಲಿಲ್ಲ.

1970ರಲ್ಲಿ ಎನ್.ಎಸ್.ಡಿ ಮುಗಿಸಿ ದೆಹಲಿಯಿಂದ ಹಿಂತಿರುಗಿದ ಮೇಲೆ ಜಯಶ್ರೀಗೆ ಕೆಲಸವಿರಲಿಲ್ಲ. ತಂಗಿ ಪದ್ಮಶ್ರೀ ಎನ್.ಎಸ್.ಡಿ ಯಲ್ಲಿ ಓದುತ್ತಿದ್ದರು. 1974ರಲ್ಲಿ ಸಿ. ರಾಜಣ್ಣನವರೊಂದಿಗೆ ಮದುವೆ ಯಾಯಿತು. ಅದೊಂದು ವಿಷಮ ದಾಂಪತ್ಯ. ಬಂದದ್ದನ್ನೇ ಪ್ರಸಾದ ವೆಂದು ಸ್ವೀಕರಿಸಿದರು ಜಯಶ್ರೀ. ಗಂಡ ಮತ್ತು ತಾಯಿಯ ಜೊತೆ ಅವಿಭಕ್ತ ಕುಟುಂಬದಿಂದ ಹೊರಬಂದು ಪುಟ್ಟದೊಂದು ಮನೆ ಮಾಡಿದರು. 75ರಲ್ಲಿ ಮಗಳು ಸುಷ್ಮಾ ಹುಟ್ಟಿದಳು. ಮಗುವನ್ನು ನೋಡಲೆಂದು ಸ್ನೇಹಿತ ಓಂಪುರಿ ಮನೆಯೊಳಗೆ ಬಂದದ್ದೇ, ಮನೆಯಿಂದಾಚೆ ಹೊರಟ ಜಯಶ್ರೀಯ ಪತಿ ಹಿಂತಿರುಗಿದ್ದು ರಾತ್ರೆಗೇ. ಮನೆಯಲ್ಲಿ ದೊಡ್ಡ ರಾದ್ಧಾಂತವೇ ಆಗಿತ್ತು. ಅಪಾರ್ಥಗಳಿಗೆ, ಅಪಾದನೆ ಗಳಿಗೆ ಕೊನೆಯಿರಲಿಲ್ಲ. ಮನಸ್ಸು ಕಲಕಿತ್ತು. ಏನೂ ತಪ್ಪನ್ನು ಮಾಡದಿದ್ದರೂ ಈಕೆ ಪಾಪಪ್ರಜ್ಞೆಯ ಕೂಪದಲ್ಲಿ ಮುಳಿಗಿಹೋಗುವಹಾಗೆ ಇವರ ಪತಿ ನಡೆದುಕೊಂಡಿದ್ದರು. ದಿಕ್ಕು ತೋರದೆ ತಾಯಿ ತಮ್ಮ ಊರುಗೋಲನ್ನೆತ್ತಿ ಮಗಳಿಗೆ ಬೇಕಾಬಿಟ್ಟಿ ಬಡಿದುಹಾಕಿದ್ದಲ್ಲದೆ, ತಾನಿನ್ನು ಅವಳ ಜೊತೆಗಿರುವುದಿಲ್ಲವೆಂದು ಹೇಳಿ ಮನೆ ಬಿಟ್ಟು ಹೊರಟು ನಿಂತರು. ದಿಕ್ಕು ತೋಚದ ಜಯಶ್ರೀ ಕೈಗೂಸನ್ನು ಹಿಡಿದು, ತಾನೂ ಅಲ್ಲಿರುವುದಿಲ್ಲ ವೆಂದು ಅಮ್ಮನನ್ನು ಬೇಡಿ ಅವರ ಹಿಂದೆಯೇ ಹೊರಟರು. ಈಗ ಆರ್ಥಿಕಬೆಂಬಲಕ್ಕೊಂದು ದಾರಿ ನೋಡಿಕೊಳ್ಳಲೇಬೇಕಿತ್ತು. ತಾಯಿ ಮಾಲತಮ್ಮನವರ ಜೊತೆ ಮನೆಯಲ್ಲೇ ಪ್ಲಾಸ್ಟಿಕ್ ಕವರುಗಳನ್ನು ಮಾಡಿ ಮಾರಿ ಹಣ ಸಂಪಾದಿಸಿದರು. ಕಡೆಗೂ ವಿಮಲಾರಂಗಾಚಾರ್ ಅವರ ಶಿಫಾರಸ್ಸಿನಿಂದ ಬಾಲಭವನದಲ್ಲಿ ಕೆಲಸವೊಂದು ಸಿಕ್ಕಿತು. ಮಕ್ಕಳ ರಂಗಭೂಮಿಗೆ ಸಾಕಷ್ಟು ಕೆಲಸ ಮಾಡಿದರು. ಆದರೂ ಎನ್.ಎಸ್.ಡಿ. ಯಲ್ಲಿದ್ದಾಗ ನಾಟಕದ ಸುತ್ತ ಕಟ್ಟಿಕೊಂಡ ಕನಸು ಒಳಗೇ ಗುನುಗುತ್ತಿತ್ತು.

ಅದೊಂದುದಿನ ಪ್ರಸನ್ನ ಮತ್ತು ಮಾಲತಿ ಜಯಶ್ರೀಯವರ ಮನೆಗೆ ಬಂದರು. ಗಾರ್ಕಿಯ 'ಮದರ್' ನಾಟಕ ಮಾಡುವುದಾಗಿಯೂ, ಅದರಲ್ಲಿ ತಾಯಿಯ ಪಾತ್ರವನ್ನು ಜಯಶ್ರೀ ಮಾಡಬೇಕೆಂದೂ ತಿಳಿಸಿದರು. 'ತಾಯಿ' ನಾಟಕ, ಜಯಶ್ರೀ ಅವರ ಪಾತ್ರ ದಂತಕತೆಯಂತೆ ರಂಗ ಇತಿಹಾಸದಲ್ಲಿ ದಾಖಲಾಗಿದೆ. "ಗಾರ್ಕಿಯ ಈ ನಾಟಕದಲ್ಲಿ ಅವರ ಹೆಂಡತಿಯೇ ತಾಯಿಯ ಪಾತ್ರವನ್ನು ಮಾಡಿದ್ದರೆಂದು ಕೇಳಿದ್ದೆ. ಎನ್.ಎಸ್.ಡಿ ಯಲ್ಲಿದ್ದಾಗ 'ಮದರ್' ನಾಟಕದ ಆಕೆಯ ಫೋಟೋ ಗಳನ್ನು ನೋಡಿ ಈ ಪಾತ್ರವನ್ನು ನಾನೂ ಮಾಡಬೇಕೆಂದು ಕನಸು ಕಂಡಿದ್ದೆ. ಎನ್.ಎಸ್.ಡಿ ಯಲ್ಲಿದ್ದಾಗ ಆಸೆ ಪಟ್ಟ ಎಲ್ಲಾ ರೋಲ್‌ಗಳನ್ನೂ ಮಾಡುವ ಅವಕಾಶ ಬೆಂಗಳೂರಿಗೆ ಬಂದಮೇಲೆ ನನಗೆ ದೊರಕಿತು", ಎಂದು ಕನ್ನಡ ರಂಗಭೂಮಿಗೆ ಪ್ರೀತಿಯಿಂದ ಕೃತಜ್ಞತೆ ಸಲ್ಲಿಸುತ್ತಾರೆ ಜಯಶ್ರೀ. 'ತಾಯಿ'ಯ ನಂತರ ಬಂದದ್ದು 'ಘಾಶೀರಾಮ್ ಕೋತ್ವಾಲ್'. ಅನಂತರ 'ಲಕ್ಷಾಪತಿ ರಾಜನ ಕಥೆ', 'ಕರಿಮಾಯಿ', 'ಸಿರಿ ಸಂಪಿಗೆ', 'ನಾಗಮಂಡಲ'... ಹೀಗೆ ನಿಲ್ಲದೆ ಮುಂದುವರೆದಿತ್ತು ರಂಗ ಪ್ರಯಾಣ.




ಈ ಪ್ರಯಾಣ ದಾದ್ಯಂತ ಬದುಕಿನ ವಿವಿಧ ಮುಖಗಳನ್ನು ಕಂಡುಬಿಟ್ಟರು ಈ ನಟಿ. ಪ್ರೀತಿ, ದ್ವೇಷ, ಅಸೂಯೆ, ಅಸಡ್ಡೆ, ಗಂಡಸರ ಪೊಸೆಸಿವ್ ನೆಸ್, ಅಹಂಕಾರ... "ಒಂದಲ್ಲ ಎರಡಲ್ಲ ಬದುಕು ಹೇಳಿಕೊಟ್ಟ ಪಾಠ" ಅನ್ನುತಾರೆ ಈಕೆ. ಮತ್ತೊಬ್ಬ ರಂಗಕರ್ಮಿ ಆನಂದ ರಾಜು ಅವರು ಗೆಳೆಯನಾಗಿ ಬಂದರು. ಈಗ ಮದುವೆ ಮಾಡಿಕೊಂಡು ಗೆಳೆತನವನ್ನು ನಿರಂತರವಾಗಿ ಉಳಿಸಿಕೊಂಡರೆ, ಮಗಳಾಗಿ ಬಂದ ರುದ್ರ ಇವರ ರಂಗಚಟುವಟಿಕೆಗಳಲ್ಲೂ ಪಾಲ್ಗೊಳ್ಳಲಾರಂಭಿಸಿದ್ದಾಳೆ. ಜೊತೆಗಿರಬೇಕಾದ ನೆಂಟರಿಷ್ಟರೆಷ್ಟೋ ಜನ ದೂರ ಸರಿದಿದ್ದಾರೆ. ತಾಯಿ ಮಾಲತಮ್ಮ ಅಗಲಿದ್ದಾರೆ. ಬದುಕು ಏನೇನೋ ಆಗಿ ಬದಲಾದರೂ, "ನನ್ನ ಬದುಕಲ್ಲಿ ಯಾರೇ ಬರಲಿ, ಯಾರೇ ಹೋಗಲಿ, ಕಡೆವರೆಗೆ ಜೊತೆಗುಳಿಯುವುದು ರಂಗಕರ್ಮ ಮಾತ್ರ" ಅನ್ನುತ್ತಾರೆ ಜಯಶ್ರೀ.

ಬಿ. ಜಯಶ್ರೀಗೆ ಓಪನ್ ಯೂನಿವರ್ಸಿಟಿಯು ಡಾಕ್ಟರೇಟ್ ಪ್ರದಾನ ಮಾಡಿದೆ. ರಾಜ್ಯ ನಾಟಕ ಅಕಾದೆಮಿ ಪ್ರಶಸ್ತಿ ದೊರಕಿದೆ. ಉತ್ತರ ಪ್ರದೇಶ ಸರ್ಕಾರ ನೀಡುವ ಸಫ್ದರ್ ಹಷ್ಮಿ ಪ್ರಶಸ್ತಿಯ ಮೊದಲ ಪುರಸ್ಕೃತರು ಇವರು. ಈ ಹಿಂದೆ ಇವರು ಎನ್.ಎಸ್.ಡಿ ಯ ಪ್ರಾದೇಶಿಕ ಸಂಪನ್ಮೂಲ ಕೇಂದ್ರದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ನಾಟಕಗಳು ಭಾರತದಲ್ಲೂ ವಿದೇಶಗಳಲ್ಲೂ ವಿವಿಧ ರಂಗೋತ್ಸವ ಗಳಲ್ಲಿಯೂ ಪ್ರದರ್ಶನಗೊಂಡಿವೆ. ಭಾರತದ ಪ್ರಮುಖ ರಂಗ ನಿರ್ದೇಶಕರುಗಳಲ್ಲೊಬ್ಬರಾದ, ಬಹುಮುಖ ಪ್ರತಿಭೆಯ ಈ ಕಲಾವಿದೆ ಕನ್ನಡ ಸಾಂಸ್ಕೃತಿಕ ವಲಯಕ್ಕೆ ಇನ್ನೂ ಹೆಚ್ಚಿನ ಕೊಡುಗೆಯನ್ನು ನೀಡುವಂತಾಗಲಿ.

❑



# ಹಳೆಯ ಹುಡುಗಿಯ ಹಾಡು

• ವೈದೇಹಿ

ಬರೆಯ ಹೋದದ್ದು ಸಾರಾಗಿ ಹರಿಯಿತು
ಕಥೆ ಹೋಗಿ ತೂತು ದೋಸೆಯಾಯ್ತು
ಚಟ್ನಿ ಅರೆಯದೆಯೆ ವಿಧಿಯುಂಟೆ ಗೆಳತೀ
ಬಟಾಟೆ ಪಲ್ಯವ್ರೋ ಎಲ್ಲರಿಷ್ಟ
ಮನೆಯೆಂದ ಮೇಲೆ ಬಿಡು, ಏನು ಕಷ್ಟ?

ಒಮ್ಮೆ ಬೇಸರವಾಗಿ ದೋಸೆ ತೂತಿನಲಿಣುಕಿ
ಕಂಡಕಂಡ ಮನೆಮನೆಯ ಶೋಧಿಸಿದೆ.
ಹಬೆಗೆ ಅಕ್ಷರ ಬೆಂದು ಮುದ್ದೆಯಾಗಿ
ಶೋಧನೆಯು ಲೊಳಲೊಟ್ಟೆ ಕರ್ಮವಾಯ್ತು

ಮತ್ತೆ ಬರೆಯಲು ಕುಳಿತೆ ತ್ರಿವಿಕ್ರಮಿಯಂತೆ
ಚೋಟುದ್ದ ಹಗಲ ದಳ ಮಡಚಬೇಕು
ಕತ್ತಲಲಿ ಮಾಣಿಕ್ಯ ಹೊಳೆದ ಕ್ಷಣ ಕವನಕ್ಕೆ
ಶಬ್ದ ಶಬ್ದವ್ರೂ ಮುಗಿದು ನಿಶ್ಶಬ್ದವಾಗಿ
ಇನ್ನೇನು ಮಿಂಚಾಗಿ ದಾಟಬೇಕು,

ಥಟ್ಟನೇ ಕಾಲಡಿಯ ಕಸವಾಯ್ತು ಗೆಳತಿ
ಧಿಗ್ಗನೆದ್ದು ಗುಡಿಸಿ ಗುಪ್ಪೆ ಮಾಡಿ
ಮೇಲೆ ನೋಡಿದೆ, ಜೇಡ ನೇಯುತಿತ್ತು
ಸಾಲೆಬಲೆ ಲಾವಣಿಯ ಲಾಲಲ್ಲಾ ಹಾಡುತ್ತ
ನೋಟ ನನ್ನೆಡೆ ಕರುಣೆ ಸಣ್ಣ ಹಾಸ
ಪ್ರೊರಕೆ ಬೀಸಿದ್ದೇ ಓಟ ಕಿತ್ತಿತು

ಅಂತು ಮುಹೂರ್ತವನು ಹೊಸದಾಗಿ ತೆರೆವಾಗ
ತೊಟ್ಟಿಲಲಿ ನಕ್ಷತ್ರ! ಬಾ ಕರೆಯಿತು
ಕರೆಗೆ ಕತೆ ಕವನ ಹಾಲಾಗಿ ಎದೆ ಕಟ್ಟಿ
ಬಂದೆ ಬಂದೇ ನನ್ನ ಚಂದನದ ಗೊಂಬೆ
ಹಾಲು ಕುಡಿ ನೀನೇ ಕವನ ಎಂದೆ

ಹೀಗೆ ದಿನದಿನವ್ರೂ ದಿನದಿನಗಳನು ಬೀಳ್ಕೊಟ್ಟೆ
ಮಗುವನಳಿಸದೆ ಪಲ್ಯ ಕರಟಿಸದೆ ಹತ್ತಿಸದೆ
ಅಡುಗೆ ಮನೆಯಲೆ ಶ್ಲೋಕ ಸಾಲು ಕಟ್ಟಿ
ದೇವಿಗೂ ಅಭ್ಯಾಸವಾಯ್ತು ಈ ಭಕ್ತಿ

ಒಂದು ದಿನ ಕೇಳಿಲ್ಲಿ
ಗೂಡಿಂದ ದೇವಿ
ಎದ್ದು ಬಂತು ತಾನು ಪ್ರಸನ್ನೆ ಅಂತು
ನಿನಗೇನು ವರಬೇಕು ಬೇಡಿಕೋ ಅಂತು!
ನಿಮಿಷ ಮಾತ್ರದಿ ಅನಿಮಿಷೆಯ ಕೇಳಿದೆ ನಾನು
ಮಾಡುವೆಯ ನನ್ನನು ಕಾಳಿದಾಸಿ?
ರಾತ್ರಿ ಕಳೆಯುದರೊಳಗೆ ಕಾವ್ಯಭಾಷಿ?

ನಕ್ಕಳಾ ತಾಯಿ, ನಕ್ಕಳಾ ತಾಯಿ
ವರವ ಬಯಸಿದ ಹಳೆಯ ಹುಡುಗಿ ತಲೆ ನೇವರಿಸಿ
ನಕ್ಕಳಾ ಮಾಂಕಾಳಿ ಬಿಕ್ಕಿ ಬಿಕ್ಕಿ

❑

*ಚಿತ್ರ ಕೃಪೆ : ಕೃಷ್ಣ ರಾಯಚೂರು*

ನಾಚಾರಮ್ಮನವರ ಐತಿಹ್ಯ ಸುಪ್ರಸಿದ್ಧವಾದುದೇ. ಹೀಗಾಗಿ ಮಹಿಳಾ ಸಾಹಿತ್ಯ ಚರಿತ್ರೆಯ ಪುನರ್ ನಿರ್ಮಾಣ ಹಾಗೂ ಪ್ರಧಾನ ಸಾಹಿತ್ಯ ಚರಿತ್ರೆಯ ಪುನರ್‌ಮೌಲ್ಯಮಾಪನ ಕಾರ್ಯಗಳು ಮಹಿಳಾ ವಿಮರ್ಶೆ ಹಾಗೂ ಸಂಶೋಧನೆಯ ಆದ್ಯ ವಿಷಯಗಳಾಗಿವೆ.

ಪ್ರಧಾನ ವಿಮರ್ಶೆಯ ನಾಲ್ಕು ನೆಲೆಗಳಾದ ಕರ್ತೃ, ಸಮಾಜ, ಓದುಗ ಹಾಗೂ ಕೃತಿ ಕೇಂದ್ರಿತತೆಗಳ ಆಯಾಮವನ್ನು ಮೀರುವಲ್ಲಿ ಸ್ತ್ರೀವಾದಿ ವಿಮರ್ಶೆ ಆಸಕ್ತ. ಪ್ರಧಾನ ವಿಮರ್ಶೆಯೊಂದಿಗೆ ಮಹಿಳಾ ವಿಮರ್ಶೆ ಹೊಂದುವ ಸಂಬಂಧದ ಪರ-ವಿರೋಧತ್ವವನ್ನು ಚರ್ಚೆಗೊಳಪಡಿಸುತ್ತ ಮಹಿಳಾ ಸಾಹಿತ್ಯಅಧ್ಯಯನದ ಅನನ್ಯತೆಯನ್ನು ಶೋಧಿಸಬಹುದಾಗಿದೆ. ಸ್ತ್ರೀವಾದಿ ವಿಮರ್ಶೆಯು ವಿಮರ್ಶೆಯ ಈ ನಾಲ್ಕೂ ನೆಲೆಯ ದೃಷ್ಟಿವಿಧಾನ (approach)ಗಳಲ್ಲಿ ಯಾವುದಾದರೂ ಒಂದಾಗಿ ನಿಲ್ಲತಕ್ಕದ್ದಲ್ಲ. ಕ್ರಾಂತಿಕಾರಕ ದೃಢನಿಲುವಿನಲ್ಲಿ ಈ ಎಲ್ಲ ವಿಮರ್ಶಾ ದೃಷ್ಟಿವಿಧಾನಗಳನ್ನು ಪುನರ್ ವ್ಯಾಖ್ಯಾನಕ್ಕೆ ಒಳಪಡಿಸುತ್ತದೆ. ಹೊಸತೊಂದು ವಿಶ್ವವನ್ನೇ ಸ್ಥಾಪಿಸುತ್ತದೆ. ಕೆಲವು ಸ್ತ್ರೀವಾದಿಗಳು ಪ್ರಜ್ಞಾಪೂರ್ವಕವಾಗಿ ಯಾವುದೇ ನಿರ್ದಿಷ್ಟ 'ಸಿದ್ಧಾಂತ'ಕ್ಕೆ ಆತುಕೊಳ್ಳಲು ಇಷ್ಟಪಡುವುದಿಲ್ಲ. ಬೌದ್ಧಿಕ ನಿಕಾಯಗಳಲ್ಲಿನ ಸಿದ್ಧಾಂತಗಳು ಸಾಮಾನ್ಯವಾಗಿ ಪುರುಷ ಕೇಂದ್ರಿತವೇ. ಮಹಿಳಾ ಸೃಜನಶೀಲತೆಯನ್ನು ಮೌಲ್ಯಮಾಪನ ಮಾಡುವಾಗ ಪ್ರಧಾನ ವಿಮರ್ಶೆಯು ಮಾಡಿರುವ ದೊಡ್ಡ ಆಕ್ಷೇಪವೆಂದರೆ- ಮಹಿಳಾ ಬರವಣಿಗೆಗಳು ಯಾವುದೇ ನಿರ್ದಿಷ್ಟ ತಾತ್ತ್ವಿಕ ಪಂಥದ ಪ್ರಭಾವಕ್ಕೆ ಒಳಗಾಗಿಲ್ಲ ಎಂಬುದು. ನಮ್ಮ ಅನೇಕ ಲೇಖಕಿಯರೇ ಮುನ್ನುಡಿಯ ಮಾತುಗಳಲ್ಲಿ ತಾವು ಯಾವುದೇ ಸಾಹಿತ್ಯಕ ಪಂಥದ ಬಗೆಗಾಗಲೀ ಕೃತಿಯ ರಚನಾತಂತ್ರದ ಬಗೆಗಾಗಲೀ 'ಆಸಕ್ತರಲ್ಲ', 'ತಲೆಕೆಡಿಸಿಕೊಂಡಿಲ್ಲ', 'ತಿಳುವಳಿಕೆ ಹೊಂದಿಲ್ಲ', 'ಅರಿಯುವ ಅವಕಾಶ ಒದಗಲಿಲ್ಲ' ಎಂದು ಹೇಳಿಕೊಂಡಿದ್ದಾರೆ. ಕಾವ್ಯಮೀಮಾಂಸೆಯ ಜ್ಞಾನ ದರ್ಪಕ್ಕೆ ಬೆದರಿ ಅಳುಕಿನಿಂದಲೇ ತಮ್ಮ ಕೃತಿರಚನಾಯತ್ನವನ್ನು 'ಸಾಹಿತ್ಯ ದೇವಿಗೆ ಅಳಿಲು ಸೇವೆ' ಎಂದು ಹೆಸರಿಸಿ ವಿನಮ್ರವಾಗಿ ತಲೆಬಾಗಿ ನಿಲ್ಲುತ್ತಾರೆ. ವಿಮರ್ಶೆಯಲ್ಲಿ 'ವಿನಯ'ವನ್ನು ಒಂದು ಮೌಲ್ಯವಾಗಿ ಪರಿಭಾವಿಸಿದ ಜಿ.ಎಚ್. ನಾಯಕರು ಎರಡು ರೀತಿಯ ವಿನಯವನ್ನು ಸಾಹಿತ್ಯ ಹಾಗೂ ವಿಮರ್ಶೆ ಒಳಗೊಳ್ಳಬೇಕೆನ್ನುತ್ತಾರೆ. ಸಮಾಜಕಲ್ಪಿತ ಮೌಲ್ಯಾದರ್ಶಗಳ ಉಪಾಧಿಯನ್ನು ಎದುರಿಸಿ ಸ್ವಂತ ಜೀವನಾನುಭವಗಳ ಪ್ರಾಮಾಣಿಕ ಅಭಿವ್ಯಕ್ತಿಯಾಗಿ 'ನೇತ್ಯಾತ್ಮಕ ವಿನಯ' ಪ್ರಕಟವಾಗುತ್ತದೆ. ತನ್ನ ಅನುಭವಸತ್ಯದ ಸಾಪೇಕ್ಷತೆಯ ಹಾಗೂ ಭಾಷಾಭಿವ್ಯಕ್ತಿಯ ಮಿತಿಯ ಅರಿವು 'ಇತ್ಯಾತ್ಮಕ ವಿನಯ'ವೆನಿಸುತ್ತದೆ. ಇವೆರಡೂ ಆದರ್ಶಪ್ರಾಯವಾಗಿ ಪ್ರಕಟವಾಗುವ ಬಗೆಯೇ ಸಾಹಿತ್ಯದಲ್ಲಿ ವಿನಯುವೆನಿಸುತ್ತದೆ: ವಿಮರ್ಶಕರಲ್ಲಿಯೂ ಇಂಥದ್ದೇ ವಿನಯ ಪ್ರಕಟವಾಗಬೇಕೆಂಬ ನಿಲುವು ಜಿ.ಎಚ್. ನಾಯಕರದು.

ಮೇಲೆ ಪ್ರಸ್ತಾಪಿಸಿದ ನಮ್ಮ ಲೇಖಕಿಯರ ವಿನಯ ವಿನಮ್ರತೆಗೂ ಜಿ.ಎಚ್. ನಾಯಕ ಹಾಗೂ ಕೀರ್ತಿನಾಥ ಕುರ್ತುಕೋಟಿಯವರು ಪರಿಕಲ್ಪಿಸುವ ವಿನಯಕ್ಕೂ ಅಗಾಧ ಅಂತರವಿದೆ. 'ಪರಿವರ್ತನೆ' ಕಥಾ ಸಂಕಲನದ ಕತೆಗಾರ್ತಿ ಲಲಿತಮ್ಮ ಡಾ.ಚಂದ್ರಶೇಖರ್ ತಮ್ಮನ್ನು ಕಾಡಿದ ಜೀವನಾನುಭವಗಳ ಒತ್ತಡವನ್ನು ಹೊರಹಾಕಲೆಂದೇ ಬರೆದೆನೆನ್ನುತ್ತಾರೆ. ತಮ್ಮ ಬರವಣಿಗೆಯ ಮಿತಿಯನ್ನವರು ನಿವೇದಿಸುತ್ತಾರೆ. "ನಾನೇನೂ ಪಂಡಿತಳಲ್ಲ. ಸಾಹಿತ್ಯ ರಚನೆಯ ತಂತ್ರಗಳು ನನಗೆ ಗೊತ್ತಿಲ್ಲ. ಅನ್ನಿಸಿದ್ದನ್ನು ಅಭಿವ್ಯಕ್ತಗೊಳಿಸಿದ್ದೇನೆ. ಈ ಕಥಾ ಸಾಕ್ಷಿಗೆ ಮೀರಿದ ಸತ್ಯದರ್ಶನವನ್ನು ನಾನು ಬೇರೆ ಕಾಣುತ್ತಿಲ್ಲ" ಎನ್ನುವ ಇವರ ನಿಲುವು ನಾಯಕರು ಅಪೇಕ್ಷಿಸುವ ಎರಡನೇ ವಿನಯವನ್ನು ಒಳಗೊಳ್ಳುವುದಿಲ್ಲ. 1983ರಲ್ಲಿ ಹೊರಬಂದ ಈ ಮಾತುಗಳು ಕನ್ನಡ ವಿಮರ್ಶಾ ಸಂದರ್ಭದ ವೈಚಿತ್ರ್ಯಕ್ಕೆ ನಿದರ್ಶನ ಒದಗಿಸಿವೆ. 80ರ ದಶಕದ ಹೊತ್ತಿಗಾಗಲೇ ರೊಮ್ಯಾಂಟಿಕ್, ಪ್ರಗತಿಶೀಲ, ನವ್ಯ ಪಂಥಗಳನ್ನು ದಾಟಿ ದಲಿತ, ಬಂಡಾಯ ಹಾಗೂ ಸ್ತ್ರೀವಾದಿ ಚಳವಳಿಗಳು ಪ್ರಚುರಗೊಂಡಿದ್ದವು. ವಾರ, ಮಾಸಪತ್ರಿಕೆ, ವಿಶೇಷ ಸಂಚಿಕೆಗಳಲ್ಲಿ ಪ್ರಕಟವಾದ ಇವರ ಕತೆಗಳ ಹಿಂದಿನ ತಾತ್ತ್ವಿಕತೆ ನವೋದಯ ಸಂದರ್ಭದ್ದೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಕೃತಿ-ರಚನೆ ಆಯಾಮಕ್ಕಿಂತ ಕೃತಿ-ಕರ್ತೃ ಆಯಾಮವನ್ನು ಕತೆಗಾರ್ತಿ ಆಯ್ಕೆಮಾಡಿಕೊಂಡಿದ್ದಾರೆ. ಹಾಗೆಂದೇ ವಿಶ್ವಾತ್ಮಕ, ಸಾರ್ವಕಾಲಿಕ ತಾತ್ತ್ವಿಕ ಕಲ್ಪನೆಯನ್ನು ಅವರು ಹೊಂದಿದ್ದಾರೆ.

ಆಧುನಿಕ ಹಾಗೂ ಆಧುನಿಕಪೂರ್ವದ ಕನ್ನಡ ಸಾಹಿತ್ಯಚರಿತ್ರೆಯಲ್ಲಿನ ಮಹಿಳಾಸಾಹಿತ್ಯದ ಪ್ರತಿನಿಧೀಕರಣದ ಸಮಸ್ಯೆಯ ಹಿಂದೆ ಇರುವ ಸಾಂಸ್ಥಿಕ ಒತ್ತಡಗಳನ್ನು ಸಬಿಹಾಭೂಮಿಗೌಡ ನಿದರ್ಶನಪೂರ್ವಕವಾಗಿ ವಿಶ್ಲೇಷಿಸಿದ್ದಾರೆ. ಸಾಂಸ್ಥಿಕ ಒತ್ತಡಗಳು ಸೃಜಿಸುವ ಆಯ್ಕೆಗಳಲ್ಲಿ ಪ್ರತ್ಯೇಕತೆಯ ನಿಯಮ ಹಾಗೂ ತರತಮಶ್ರೇಣಿ ಕಾರ್ಯನಿರ್ವಹಿಸುವ ಬಗೆಯನ್ನು ಸಬಿಹಾ ತಮ್ಮ ವಿಶ್ಲೇಷಣೆಯಲ್ಲಿ ಮಾನವದಂಡವಾಗಿಟ್ಟುಕೊಂಡಿದ್ದಾರೆ. ಸೃಜನಶೀಲ ಸಾಧನೆಗಳ ಇತಿಹಾಸದಲ್ಲಿ ಪ್ರಥಮ ಪ್ರಯತ್ನಗಳ ಬಗೆಗೆ ಹೆಚ್ಚು ಮೌಲ್ಯಾಂಕವಿರುವುದು ಸರ್ವೆಸಾಮಾನ್ಯ. ಅದರಲ್ಲಿಯೂ ಮಹಿಳಾಸೃಜನಶೀಲತೆಯ ಸ್ಫೂರ್ತಿಕೇಂದ್ರವಾಗಿ ಮಹಿಳಾ ಕರ್ತೃತ್ವವನ್ನು 'ಪ್ರಥಮ ಪ್ರಯತ್ನ'ದ ನೆಲೆಯಲ್ಲಿ ಪರಿಭಾವಿಸುವಾಗ ಸಹಜವಾಗಿಯೇ ಹೆಮ್ಮೆ-ಉತ್ಸಾಹಗಳಿಗವಕಾಶವಿದೆ. ಕಂತಿಯ ಮೂಲಕ ಆರಂಭಗೊಳ್ಳುವ ಪ್ರಾಚೀನ ಮಹಿಳಾ ಕನ್ನಡ ಸಾಹಿತ್ಯದ ಪ್ರತಿನಿಧೀಕರಣದ ಹಿಂದಿರುವ ಲಿಂಗತಾರತಮ್ಯ ನೀತಿಯನ್ನು ಸಬಿಹಾ ಬಯಲಿಗೆಳೆಯುತ್ತಾರೆ. ಸಂಶೋಧಕ ವಿದ್ವಾಂಸರಾದ ಎ. ವೆಂಕಟಸುಬ್ಬಯ್ಯ, ರಂ.ಶ್ರೀ. ಮುಗಳಿ ಹಾಗೂ ಸಿ. ವೀರಣ್ಣ ಮೊದಲಾದವರು ಚಾರಿತ್ರಿಕ ಆಧಾರವಿಲ್ಲದ ಕಾರಣ ಆಕೆಯ ಅಸ್ತಿತ್ವವನ್ನು ನಿರಾಕರಿಸಿದ್ದಾರೆ. ನಾಗಚಂದ್ರನ ಬಗೆಗಿನ ಸಂಶೋಧನ ಮಹಾಪ್ರಬಂಧದಲ್ಲಿ ಡಾ. ವಿಜಯಾದಬ್ಬೆಯವರೂ ಆಂತರಿಕ ಪ್ರಮಾಣಗಳ ಅಭಾವವೇ ಕಾರಣವಾಗಿ ನಾಗಚಂದ್ರ ಕಂತಿಯರ ಸಂಭಾಷಣೆಯನ್ನು ಚಾರಿತ್ರಿಕ ಸತ್ಯದಿಂದ ದೂರವಿರುವ ಸಂಗತಿಯಾಗಿ ನಿರ್ಧರಿಸಿದ್ದಾರೆ. ಜಿ.ಎಸ್.ಎಸ್. ಅವರಿಗೆ ಚಾರಿತ್ರಿಕ ಸತ್ಯವನ್ನಾಧರಿಸಿದ ಕಂತಿಯ ಕರ್ತೃತ್ವವಾಗಲೀ ಕಾವ್ಯತ್ವವಾಗಲೀ ಮುಖ್ಯವಾಗದೆ, ಅವಳ ಸೃಜನಶೀಲತೆಯ ಹಿಂದಿನ ಮಿಥ್ ಮುಖ್ಯವಾಗುತ್ತದೆ. ಜ್ಯೋತಿಷ್ಮತಿ ತೈಲ ಸೇವನೆಯಿಂದ ವಿದ್ಯಾವಿಶಾರದೆಯಾಗಿ ರಾಜಾಸ್ಥಾನದಲ್ಲಿ ಸನ್ಮಾನಿತೆಯಾದಳೆಂಬ ಸಂಗತಿಯ ಬಗೆಗೆ ಅವರು ಹೀಗೆ ಪ್ರತಿಕ್ರಿಯಿಸುತ್ತಾರೆ.


ಜಿ.ಎಸ್. ಶಿವರುದ್ರಪ್ಪ

"..... ಈ ಕತೆಯಿಂದ ಕಂತಿಗೆ ಮಾತ್ರವಲ್ಲ, ಯಾವ ಮಹಿಳಾ ಸಾಹಿತಿಗೂ ಅವಮಾನವಾಗುವುದು ಖಂಡಿತ. ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಈ ಕತೆಯಲ್ಲಿ ಅನಾರೋಗ್ಯಕರವಾದ ಒಂದು ಅಂಶವಿದೆ. ಅದೆಂದರೆ, ಹೆಣ್ಣಾದ ಕಂತಿಯಂಥವಳು ಕವಿತ್ವಕ್ಕೆ ಕೈಹಾಕಲು, ಅವಳಲ್ಲಿ ಸ್ವಂತ ಬುದ್ಧಿ-ಪ್ರತಿಭೆಗಳಿರಲಿಲ್ಲ; ಅದೇನಿದ್ದರೂ ಆಕಸ್ಮಿಕವಾಗಿ ಜ್ಯೋತಿಷ್ಮತಿ ತೈಲವನ್ನು ಕುಡಿದಿದ್ದರಿಂದ ಬಂತು ಎನ್ನುವುದು. ಎಂದರೆ ಮೂಲತಃ ಸ್ತ್ರೀಯರಿಗೆ ಕಾವ್ಯ ನಿರ್ಮಾಣ ಮಾಡುವ ಸಾಮರ್ಥ್ಯ ಸಹಜವಾಗಿ ಎಲ್ಲಿಂದ ಬರಬೇಕು ಎನ್ನುವುದೇ ಈ ಕತೆಯ ಹಿಂದಿನ ಕುಹಕಾರ್ಥ". ಕರ್ನಾಟಕಕ್ಕೆ ವಲಸೆ ಬರಲು ಕಾರಣಳಾದ ಸಂಕೇತಿ ಜನಾಂಗದ

ನಾಚಾರಮ್ಮನ ಬಗೆಗೂ ಇಂಥದ್ದೇ ಕತೆಯಿದೆ. ಬಡತನದಿಂದ ವಿಮುಕ್ತಗೊಳ್ಳಲು ಗಂಡ ಸಿದ್ಧಪಡಿಸಿದ್ದ ಜ್ಯೋತಿಷ್ಮತಿ ತೈಲವನ್ನು ಆಕೆ ಸೇವಿಸಿದುದರ ಪರಿಣಾಮ ದುರಂತಮಯ. ಆಕೆ ಪಾಂಡಿತ್ಯ ಪಡೆದರೂ ತೈಲಪ್ರಯೋಗದ ನಿಯಮಾನುಸಾರ ಸಂಸಾರವನ್ನು ಕಳೆದುಕೊಳ್ಳಬೇಕಾಗುತ್ತದೆ. ಸಿಟ್ಟಿಗೆದ್ದ ಜಾತಿಬಾಂಧವರಿಂದ ಆಕೆ ಅವಮಾನಿತಳಾಗುತ್ತಾಳೆ. ಅವರಿಗೆ ಶಾಪವಿತ್ತ ನಾಚಾರಮ್ಮ ತನ್ನ ಅಭಿಮಾನಿಗಳೊಂದಿಗೆ ವಲಸೆ ಹೋಗಬೇಕಾಯಿತು.

ಸ್ತ್ರೀವಾದಿ ವಿಮರ್ಶೆ ಹಾಗೂ ಸಂಶೋಧನೆಯ ಆದ್ಯ ಆಸಕ್ತಿಗಳು ಮಹಿಳಾ ಸೃಜನಶೀಲತೆಯ ಹಿಂದಿನ ಪುರುಷ ನಿರ್ಮಿತ ವೈಚಾರಿಕ ಆಕೃತಿಗಳ ಶೋಧವೇ ಆಗಿವೆ. ಇದುವರೆಗೂ ನಡೆದಿರುವ ಮಹಿಳಾ 'ಸಾಹಿತ್ಯ ಅಧ್ಯಯನ'ಗಳು ಸಾಕಷ್ಟು ಗಂಭೀರವಾದ, ಪ್ರಾಮಾಣಿಕವಾದ ನೆಲೆಗಳನ್ನು ಹೊಂದಿವೆ. 'ಕಂತಿ'ಯ ಕರ್ತೃತ್ವದ ಸಮಸ್ಯೆಯನ್ನು ಸಂಶೋಧನಾ ವಿಮರ್ಶೆಯ ವೈಧಾನಿಕತೆಗೆ ಅಳವಡಿಸುವ ಕಾರ್ಯ ನಿಜಕ್ಕೂ ಸವಾಲಿನದೇ; ಆದರೆ ಅಸಾಧ್ಯವೇನಲ್ಲ. ಪ್ರತಿಯೊಂದು ತಲೆಗೂದಲೂ ಪ್ರತ್ಯೇಕವೇ. ಆದರೆ ಬಾಚಿ, ತಿದ್ದಿ-ತೀಡಿ ಜಡೆ ಹೆಣೆದು ಒಪ್ಪಗೊಳಿಸಿದಂತೆ ಈ ಕೆಲಸ. ಕಂತಿಯ ಶೋಧಕ್ಕೆ ಚಾಲನೆ ಒದಗಿಸಬಲ್ಲ ವಿವಿಧ ಯತ್ನಗಳು ನಡೆದಿವೆ. ಸುಮಾರು 15ನೇ ಶತಮಾನದ್ದೆನ್ನಬಹುದಾದ ನೇಮರಸನ 'ಲೋಭದತ್ತ ಚರಿತೆ'ಯ ಪೂರ್ವಕವಿ ಸ್ಮರಣೆಯ ಪದ್ಯದಲ್ಲಿ 'ಶ್ರೀಮತಿ' ಎನ್ನುವ ಉಲ್ಲೇಖವಿದೆ. ಇದು ಯಾರೆಂಬುದು ಸ್ಪಷ್ಟವಿಲ್ಲ ಎನ್ನುವ ಡಿ. ವಿಜಯ ಅವರು "ಇದೊಂದು ವಿಶೇಷಣವೋ ಅಥವಾ ಮತ್ತಾವ ಹೆಸರಿನ ರೂಪಾಂತರಗೊಂಡ ಪಾಠವೋ ಸ್ಪಷ್ಟವಾಗುವುದಿಲ್ಲ" ಎನ್ನುತ್ತಾರೆ. 16ನೇ ಶತಮಾನದ ಶ್ರುತಕೀರ್ತಿ ಕವಿ ಕಥಿಸುವ 'ವಿಜಯಕುಮಾರಿ ಚರಿತೆ' ಕಾವ್ಯದ ನಾಯಕಿಯ ಕಥೆ 12ನೇ ಶತಮಾನದ ಬಲ್ಲಾಳರಾಯನ ಕಾಲದ್ದು. ಈ ಕೃತಿಯನ್ನು ಮೊದಲಬಾರಿಗೆ ಸಂಪಾದಿಸಿದ ವೈ.ಸಿ. ಭಾನುಮತಿಯವರು ಕೃತಿಯ ಚಾರಿತ್ರಿಕ ಸಂಗತಿಗಳೆಲ್ಲವನ್ನು ಸಾಧಾರವಾಗಿ ಪರಿಶೋಧಿಸಿದ್ದಾರೆ. ಜೈನ ಸಂಪ್ರದಾಯದ ವ್ಯಾಖ್ಯೆಯನ್ನು ಶರಣ ಚಳವಳಿಗೆ ನೀಡಿರುವ ಕೃತಿಯಿದು. ಒತ್ತಾಯಪೂರ್ವಕ ನಿಷೇಧಕ್ಕೆ ಗುರಿಯಾದ ಧರಣಿಪಂಡಿತನ 'ಬಿಜ್ಜಳರಾಯ ಚರಿತೆ'ಯ ಸಂಪ್ರದಾಯದ ಈ ಕೃತಿಯನ್ನು ಭಾನುಮತಿ ಸಂಪಾದಿಸಲು ಎತ್ತಿಕೊಂಡದ್ದೇ ಸವಾಲಿನದಾಗಿತ್ತು. ಹಿರಿಯ ಸಂಶೋಧಕರಿಂದ ಈ ಕೃತಿಯ ಸಂಪಾದನೆಯನ್ನು ಎಚ್ಚರಿಕೆಯಿಂದ ಮಾಡಿ ಎಂಬ ಎಚ್ಚರಿಕೆಯ ಪತ್ರವೂ ಅವರಿಗೆ ರವಾನೆಯಾಗಿತ್ತು. ಧಾರ್ಮಿಕ ವೈಷಮ್ಯಗಳ ಫಲಿತವಾಗಿ ಕೃತಿಯೊಂದು ಪಡೆದಿರಬಹುದಾದ ಸ್ವರೂಪವನ್ನು ಭಾನುಮತಿಯವರು ಜವಾಬ್ದಾರಿಯುತವಾಗಿ ವಿಶ್ಲೇಷಿಸಿದ್ದಾರೆ. ಜ್ಞಾನದಾಹಿ ಹೆಣ್ಣೊಬ್ಬಳ ವಿಕಾಸಕ್ಕೆ ವೈವಾಹಿಕತೆ ಒಡ್ಡುವ ಪ್ರತಿರೋಧವನ್ನು ಕೇಂದ್ರವಾಗಿಟ್ಟುಕೊಂಡ ಪ್ರಸ್ತಾವನೆಯನ್ನು ಅವರು ಬರೆದಿದ್ದಾರೆ. ಈ ವಿಜಯಕುಮಾರಿ ಸ್ವಯಂದೀಕ್ಷೆಗೊಂಡು 'ಶ್ರೀಮತಿ' ಎಂಬ ಹೆಸರಿನ ಸಂನ್ಯಾಸಿನಿಯಾಗುತ್ತಾಳೆ. ರಾಘವಾಂಕನ 'ಸೋಮನಾಥ ಚಾರಿತ್ರ'ದಲ್ಲಿ ಪರವಾದಿಗಳನ್ನು ಖಂಡಿಸುವ ಸಂದರ್ಭದಲ್ಲಿ ಶ್ರೀಮತಿಯ ಪ್ರಸ್ತಾಪ ಬರುತ್ತದೆ. ಈ ಅಂಶಗಳನ್ನು ಇಟ್ಟುಕೊಂಡು ಎಂ.ಎ. ಜಯಚಂದ್ರ ಅವರು ಶ್ರೀಮತಿಯೇ ನಾಗಚಂದ್ರನೊಂದಿಗೆ ಸಮಸ್ಯಾಪೂರಣ ಸಂವಾದಕ್ಕಿಳಿದ ಕಂತಿ ಇರಬಹುದೇ ಎಂಬ ಊಹೆಯನ್ನು ಮಾಡಿದ್ದಾರೆ. ಈ ಆಲೋಚನೆಯ ಎಳೆಯನ್ನು ಕಮಲಾ ಹಂಪನಾ ತಮ್ಮ ಲೇಖನದಲ್ಲಿ ಮುಂದುವರಿಸಿದ್ದಾರೆ. ಕಂತಿಯ ಬಗೆಗಿನ ಸಂಶೋಧನೆಯ ಸಾರ್ಥಕತೆ ಖಂಡಿತ ಉತ್ತರಗಳಲ್ಲಿಲ್ಲ; ಮುಕ್ತ ಸಂವಾದಕ್ಕೆ ಅವಕಾಶಕೊಟ್ಟು ಪ್ರಶ್ನೆಗಳನ್ನು ಪ್ರಶ್ನೆಗಳಾಗಿ ಉಳಿಸುವಲ್ಲಿನ ಪ್ರಮಾಣಿಕತೆಯಲ್ಲಿದೆ. ಭಾನುಮತಿಯಂಥ ಸಂಪಾದನಾ ಸಂಶೋಧಕರ ಶ್ರಮವು ಸ್ತ್ರೀವಾದಿ ಕಾವ್ಯಮೀಮಾಂಸೆಯ ಅನ್ವಯಿಕ ಬಳಕೆಗೆ ಅತ್ಯಗತ್ಯ. ವಿಮರ್ಶೆ ಹಾಗೂ ಸಂಶೋಧನಾ ಕ್ಷೇತ್ರಗಳಲ್ಲಿನ ಪೂರ್ವಸ್ಥಾಪಿತ-ರಾಜಮಾರ್ಗಗಳಲ್ಲಿ ಕ್ರಮಿಸುವ ಕಾಯಕ ನಿಜಕ್ಕೂ ಸವಾಲಿನದು. ಅದರಲ್ಲಿಯೂ ಮಹಿಳೆಯಾಗಿ ಈ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವ ಅನುಭವವೇ ವಿಶಿಷ್ಟ ಜ್ಞಾನಸೃಷ್ಟಿಯಾಗಿಬಿಡುತ್ತದೆ. ಸ್ತ್ರೀಶೋಷಣೆಯ ತಳಹದಿಯಿಂದ ನಿರ್ಮಿತವಾದ ಸಾಂಸ್ಕೃತಿಕ ಆಕೃತಿಗಳನ್ನು ನಿಖರವಾಗಿ ಗುರುತಿಸಿ, ಜ್ಞಾತೃಸ್ಥಾನೀಯ ನೆಲೆಯಿಂದ ಮಹಿಳೆಯೊಬ್ಬಳು ಅರಿಯುವ, ವಿಶ್ಲೇಷಿಸುವ ಕ್ರಮವೇ ಪ್ರತಿರೋಧಕ್ಕೆ ಗುರಿಯಾಗುತ್ತದೆ. ತನಗೆದುರಾದ ಈ ಪ್ರತಿರೋಧವನ್ನು ಸ್ತ್ರೀವಾದಿ ಅನುಭವಾಕೃತಿಯಾಗಿ ವಿನ್ಯಾಸಗೊಳಿಸುವಲ್ಲಿ ಕನ್ನಡ ಮಹಿಳಾ ವಿಮರ್ಶೆಯಿದೆ.


ಭಾನುಮತಿ

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಮೊದಲ ಪಿಎಚ್.ಡಿ. ಪದವೀಧರೆ ಎಂಬ ಹೆಮ್ಮೆಗೆ ಪಾತ್ರರಾದ ಡಾ. ಟಿ.ಎನ್. ನಾಗರತ್ನ ಅವರು ಹರಪನಹಳ್ಳಿ ಭೀಮವ್ವನ ಕೃತಿಗಳ ಸಂಪಾದನೆ ಸಂದರ್ಭದಲ್ಲಿ ಎದುರಿಸಿದ ಪ್ರಸಂಗಗಳು ವಿಶಿಷ್ಟವಾದವು. ಕುಟುಂಬದ ಖಾಸಗಿವಲಯಕ್ಕೆ ಮಾತ್ರ ಸೀಮಿತವಾಗಿದ್ದ ಹರಪನಹಳ್ಳಿ ಭೀಮವ್ವನ ಕೃತಿಗಳ ಗಾಯನದ ಪರಿಚಯವು ಸ್ವಯಂ ಶಾಸ್ತ್ರೀಯ ಸಂಗೀತ ಗಾಯಕಿಯಾದ ನಾಗರತ್ನರಿಗೆ ಅಂಥ ಕಷ್ಟವೇನಾಗಲಿಲ್ಲ. ಆ ಕುಟುಂಬದ ಮಹಿಳಾ ಸದಸ್ಯೆಯರು ಕುಟುಂಬದ ಆಸ್ತಿ ಎಂಬಂತೆ ಭೀಮವ್ವನ ಕೃತಿಗಳನ್ನು ಹಾಡುಗಾರಿಕೆ ಮೂಲಕ ಜತನದಿಂದ ಸಂರಕ್ಷಿಸಿಕೊಂಡು ಬಂದಿದ್ದರು. ಈ ಖಾಸಗಿ ವಲಯದೊಳಗೆ ಪ್ರವೇಶಿಸಿ ಕೃತಿಗಳನ್ನು ಸಂಪಾದಿಸುವ ಕಾರ್ಯ ನಿಜಕ್ಕೂ ಸವಾಲೊಡ್ಡಿತು. ಅನ್ಯರಿಗೆ ಇಲ್ಲಿ ಪ್ರವೇಶವಿಲ್ಲ. ಸತತವಾಗಿ ಏಳೆಂಟು ವರ್ಷಗಳಿಂದ ಒಪ್ಪಿಗೆಗಾಗಿ ನಾಗರತ್ನ ಅನುನಯದ ಬೇಡಿಕೆ




ಸಲ್ಲಿಸುತ್ತಿದ್ದರು. ಆಶ್ಚರ್ಯವೆಂದರೆ, ತನ್ನ ಕವಿತ್ವ ಪ್ರಕಟಣೆಗೆ ಅನುಮತಿ ದೊರಕಿಸಲು ಭೀಮವ್ವ ಹೇಗೆ ಕನಸಿನ ದೈವೀ ಪ್ರೇರಣೆಯನ್ನು ಬೆಂಬಲವಾಗಿ ಪಡೆದಿದ್ದರೋ ಅಂಥದ್ದೇ ದೈವೀ ಪ್ರೇರಣೆ ಆ ಮನೆಯವರಿಗೆ ಕನಸಿನಲ್ಲಿ ಆದುದರ ಫಲವಾಗಿ ನಾಗರತ್ನರಿಗೆ ಭೀಮವ್ವನ ಹಸ್ತಪ್ರತಿಗಳು ದೊರಕಿದವು. ಇಂದು ದಾಸಸಾಹಿತ್ಯ ಸಂಶೋಧನ ಕ್ಷೇತ್ರದಲ್ಲಿ ನಾಗರತ್ನ ಅವರದು ದೊಡ್ಡ ಹೆಸರು. ಸ್ನಾತಕೋತ್ತರ ಬೋಧನ ಹುದ್ದೆಗೆ ಬರಲು ತನಗೆ ಎಲ್ಲ ಅರ್ಹತೆಯಿದ್ದರೂ ಅವರು ಅದನ್ನು ಆಯ್ಕೆ ಮಾಡಿ ಕೊಳ್ಳಲಿಲ್ಲ. ವಯಸ್ಸಾದ ಅತ್ತೆ ಮಾವಂದಿರು, ಚಿಕ್ಕಮಕ್ಕಳು, ಬಂದು ಹೋಗುವ ನೆಂಟರಿಷ್ಟರು–ಇವರ ಕೆಲಸ ಮುಗಿಸಿ, ಬೋಧನೆಗೆ ಸಿದ್ಧಮಾಡಿ ಕೊಳ್ಳಲು ಕಾಲಾವಕಾಶ ದೊರೆಯದ ಕಾರಣ ಗ್ರಂಥ ಸಂಪಾದಾನಾ ವಿಭಾಗದ ಹುದ್ದೆಯನ್ನು ಆಯ್ಕೆಮಾಡಿಕೊಳ್ಳಬೇಕಾದುದು ಅವರಿಗೆ ಅನಿವಾರ್ಯವೆನಿಸಿತು. ಆದರೆ ತಾನು ಆಯ್ಕೆ ಮಾಡಿಕೊಂಡ ಕ್ಷೇತ್ರಕ್ಕೆ ಪ್ರಾಮಾಣಿಕವಾಗಿ ಸೇವೆ ಸಲ್ಲಿಸುತ್ತಿದ್ದೇನೆಂಬ ತೃಪ್ತಿ ಅವರದು. ನಿವೃತ್ತಿ ಹೊಂದಿದ ನಂತರವೂ ಸಂಸ್ಥೆಗೆ ಹೋಗಿ ದಾಸಸಾಹಿತ್ಯ ಸಂಪಾದನೆಯಲ್ಲಿ ಅವರು ನಿರತರಾಗಿದ್ದಾರೆ. ಕರ್ನಾಟಕದ ಖ್ಯಾತ ಗಮಕಿಗಳ ಸಾಲಿನಲ್ಲಿ ಮಹಿಳೆಯರ ಸಾಧನೆ ಗೌಣವಾಗೇನಿಲ್ಲ. ಸಾಹಿತ್ಯಕೃತಿಗಳ ಅರ್ಥ ವ್ಯಾಖ್ಯಾನಕ್ಕೆ ಗಮಕಕಲೆ ಅವಕಾಶ ನೀಡುತ್ತದೆ. ಆದರೆ ವಿಮರ್ಶಾ ಕ್ಷೇತ್ರದ ಸಾಧನೆಯಾಗಿ ಸ್ವತಂತ್ರ ಅರ್ಥ ವ್ಯಾಖ್ಯಾನ ಮಾಡಬಲ್ಲ ಮಹಿಳಾ ಗಮಕಿಗಳ ಸಾಧನೆಯನ್ನು ನಿರ್ಲಕ್ಷಿಸಲಾಗಿದೆ.

ಸಂಶೋಧಕ ಕ್ಷೇತ್ರಕ್ಕೆ ಮಹಿಳೆಯರು ನೀಡಿರುವ ಕೊಡುಗೆಗಳೂ ಉಪೇಕ್ಷಿತವಾಗಿವೆ. 'ಜಗನ್ನಾಥ ಚರಿತ್ರೆ'ಯ ಸಂಪಾದನ ಕಾರ್ಯದಲ್ಲಿ ಸಹಾಯಕರಾಗಿ ಕೆಲಸ ಮಾಡುತ್ತಿದ್ದ ಸಂದರ್ಭದ ಮಾಹಿತಿಯನ್ನು ವೈ.ಸಿ. ಭಾನುಮತಿ ನನಗೆ ನೀಡಿದರು. ಅತ್ಯಂತ ಪಾಂಡಿತ್ಯಪೂರ್ಣ ಸಂಸ್ಕೃತ ಭೂಯಿಷ್ಠವಾದ ಈ ಕೃತಿಯ ವಾಚನವನ್ನು ಪರೀಕ್ಷಾರ್ಥವಾಗಿ ಮದುವೆಯಾಗಬಯಸಿ ಬಂದ ಗಂಡಿಗೆ ನಿಗದಿಪಡಿಸಲಾಗುತ್ತಿತ್ತಂತೆ. ಯಶಸ್ವೀ ವಾಚನ ಮಾಡಿದವನಿಗೆ ಹೆಣ್ಣು ನೀಡುವ ಸಂಪ್ರದಾಯವಿತ್ತಂತೆ. ಆದರೆ ಹೆಣ್ಣಿಗೋ! ಪುಸ್ತಕ ಓದಿಸುವುದರ ಬದಲಿಗೆ ಸೂಜಿಯಲ್ಲಿ ದಾರವನ್ನು ಪೋಣಿಸಲು ಹೇಳಿ, ಅಂಗಾಂಗ ವೈಕಲ್ಯಗಳ ಪರೀಕ್ಷೆ ಮಾಡುವುದೇ ಮುಖ್ಯವಾಗಿತ್ತು. ಅಡುಗೆ, ಹಾಡು, ಹಸೆ ಪರಿಣತಿಯ ಜೊತೆ ವಸಾಹತು ಸಂದರ್ಭದಲ್ಲಿ ಹುಡುಗಿಗೆ ಓದು ಬರಹ ಬರುತ್ತದೆಯೇ ಎಂಬುದು ಸರ್ಕಾರಿ ಉದ್ಯೋಗಗಳಲ್ಲಿದ್ದ ಗಂಡಿನ ಅಪೇಕ್ಷೆಯಾಗಿತ್ತು ಅಷ್ಟೆ! ಹೆಣ್ಣು ಲೇಖನಿ ಹಿಡಿದರೆ ಪಿತೃಗಳು ಸ್ವರ್ಗಸ್ಥಾನದಿಂದ ಚ್ಯುತರಾಗುತ್ತಾರೆಂಬ ಆತಂಕ ಬೇರೊಂದು ರೂಪದಲ್ಲಿ ಇಂದಿಗೂ ಮಹಿಳಾ ಸೃಜನಶೀಲತೆ ಹಾಗೂ ವಿಮರ್ಶೆ ಸಂಶೋಧನೆಗಳನ್ನು ನಿರ್ಬಂಧಿಸಿದೆ. 'ನಾನು ಲೇಖಕಿ ಅಲ್ಲ'[1], 'ರಚಯಿತ್ರಿ'[2] ಅಂಥ ಜನಪ್ರಿಯ ಕಾದಂಬರಿಗಳು ಮಹಿಳಾ ಸೃಜನಶೀಲತೆಗೊಡ್ಡಲಾದ ಸಾಮಾಜಿಕ, ಕೌಟುಂಬಿಕ ನಿರ್ಬಂಧಗಳನ್ನು ವಸ್ತುವಾಗಿ ಉಳ್ಳವು. ಆದರೆ ಈ ನಿರ್ಬಂಧಗಳಿಂದ ನೋವು ಸಂಕಟಗಳಿಗೊಳಗಾಗುವ ಮಹಿಳೆ ಮತ್ತೆ ಸಂಧಾನಸೂತ್ರದಿಂದ ಬಂಧಿತಳಾಗಿ ಸುರಕ್ಷಿತನೆಲೆಗೆ ಮರಳುವ ಜನಪ್ರಿಯ ಆಶಯ ಈ ಕಾದಂಬರಿಗಳದು. ಇಂಥ ಆಶಯವನ್ನು ಭಂಜನೆ ಮಾಡುವ ಆಚರಣಾತ್ಮಕ ಕ್ರಿಯೆಯಾಗಿ ಈ ಹೊತ್ತಿನ ಮಹಿಳಾ ಸಾಹಿತ್ಯವಿದೆ. ಕೃತಿಚೌರ್ಯದ ಪ್ರಶ್ನೆ ಆಗಾಗ ಸಾಹಿತ್ಯ ವಿಮರ್ಶೆಯಲ್ಲಿ ಜೀವ ಪಡೆಯುತ್ತಿರುತ್ತದೆ. ಲೇಖಕರ ಕೃತಿಚೌರ್ಯದ ಚರ್ಚೆಯಲ್ಲಿ ಸಮಾನ ಪ್ರತಿಭೆಗಳು ಸಮಾನ ಸ್ತರದಲ್ಲಿ ಕಾರ್ಯ ನಿರ್ವಹಿಸುವಾಗ ಏಕರೂಪದ ಕೃತಿನಿರ್ಮಾಣ ಸಾಧ್ಯ ಎಂಬ ನಿಲುವು ಲೇಖಕ ಗುಂಪಿನೊಳಗೇ ಪರಸ್ಪರ ಒಪ್ಪಿತವಾಗುವ ಸಂಗತಿ ಯಾಗಿರುತ್ತದೆ. ಆದರೆ ಇಂಥ ರಿಯಾಯಿತಿಗಳು ಮಹಿಳಾ ಸೃಜನ ಶೀಲತೆಗೆ ಸಂಬಂಧಿಸಿದಂತೆ ಕಾಣಬರದು. ಕಥಾಚೌರ್ಯದ ಆಪಾದನೆ ಗೊಳಗಾದ ಲೇಖಕಿಯೊಬ್ಬರು ಪ್ರತಿಭಾಜನ್ಯ ಕಲಾಸಿದ್ಧಾಂತದ ಮಾನದಂಡವನ್ನು ಸೃಜನಶೀಲತೆಯ ಮೌಲ್ಯನಿರ್ಮಾಣಕ್ಕೆ ಬಳಸಿಕೊಳ್ಳುವ ಪ್ರಧಾನ ವಿಮರ್ಶೆಯನ್ನು ಹೀಗೆ ವಿಮರ್ಶೆಗೊಳಪಡಿಸುತ್ತಾರೆ :

"ಬರೆಯುತ್ತಾ ಸಾಹಿತಿಯಾಗುವುದು, ಸಾಹಿತಿಯಾಗಬೇಕೆಂದು ಬರೆಯುವುದು ಹೀಗೆ ಬರಹಗಾರರಲ್ಲಿ ಎರಡು ಬಗೆ. ಎರಡು ಬಗೆಯವರೂ ಯೋಗ್ಯ ಅಭ್ಯಾಸದ ಮೂಲಕವೇ ಸಾಹಿತ್ಯ ಕ್ಷೇತ್ರದಲ್ಲಿ ಹೊಳೆಯಬಲ್ಲರಾದರೂ ಆಳವಾದ ಅನುಭವ, ತತ್ಫಲವಾಗಿ ಏರ್ಪಡುವ ಪ್ರಯತ್ನದ ಅಂಶ ಎರಡನೆಯ ವರ್ಗದವರ ಕೃತಿಗಳಲ್ಲಿ ಹೆಚ್ಚಾಗಿರುತ್ತದೆ. ಈ ಹೊತ್ತಿಗೆ ಹುಟ್ಟಿಕೊಂಡುದರಲ್ಲಿ ನೂರಕ್ಕೆ ಅರವತ್ತು ಪಾಲು ನಾನು ಎರಡನೇ ವರ್ಗಕ್ಕೆ ಸೇರಿದವಳು, ದೈವದತ್ತಾದ ಪ್ರತಿಭೆ ನಮ್ಮಲ್ಲಿ ಎಷ್ಟು ಮಂದಿಗಿದೆ? ಹಾಗೆಯೆ, ಪ್ರಯತ್ನದ ಮೂಲಕವೆ ಮುಂದಕ್ಕೆ ಬಂದವರ ಸಂಖ್ಯೆ ನಮ್ಮಲ್ಲಿ ಎಷ್ಟಿಲ್ಲ? ನನ್ನಲ್ಲಿ ಪ್ರತಿಭೆಯ ಅಂಶ ಎಷ್ಟಿದೆ? – ಅದನ್ನು ತೂಗಿ ಹೇಳಲು ನಾನು ಹೊರಡುವುದಿಲ್ಲ. ಆದರೂ ಯೋಗ್ಯ 'ಪ್ರಯತ್ನ'ದ ಸಾಫಲ್ಯವನ್ನು ಪ್ರಾಯೋಗಿಕವಾಗಿ ಕಾಣಬೇಕೆಂದಾಶಿಸಿ ಬರೆದ ಆರು ಕಥೆಗಳು ಈ ಹೊತ್ತಿಗೆಯಲ್ಲಿ ಅಡಕವಾಗಿವೆ....... 'ಹಿಂದನ ಹೊಲ'ಕ್ಕೆ ಮಡಿಕೇರಿಯಲ್ಲಿ ನಡೆದ ಗೌರಮ್ಮ ಸ್ಮಾರಕ ಕಥಾಸ್ಪರ್ಧೆಯಲ್ಲಿ ಬಹುಮಾನ ಬಂದಿದೆ. ಇದರ ಬಗೆಗೆ "ಸ್ವಂತ ಕೃತಿಯಲ್ಲ" ಎಂಬ ಸಂಶಯವನ್ನು ಹಲವರು ವ್ಯಕ್ತಪಡಿಸಿದ್ದಾರೆ. ಅಂಥವರ ಸಂಶಯಕ್ಕೆ "ಇದು ಕೃತಿಚೌರ್ಯದ ಫಲವಂತೂ ಅಲ್ಲವೇ ಅಲ್ಲ" ಎಂದು ಆತ್ಮಸಾಕ್ಷಿಯಾಗಿ ಹೇಳುತ್ತೇನೆ". *(ಅಂಕುರ, ಕುಮಾರಿ ಯೋಗಿನಿ, ವಿವೇಕ ಸಾಹಿತ್ಯಮಾಲೆ, ಕೊಡಗು (1952).*

ಲೇಖಕಕರ್ತೃತ್ವವನ್ನು ಸಂಶೋಧನೆಯ ವಿಷಯವಾಗಿ ನಿರ್ಣಯಿಸಿದ ಗುಡಿಬಂಡೆ ಪೂರ್ಣಿಮಾರವರ ಅನುಭವವನ್ನು ದಾಖಲಿಸುವುದು ನನಗೆ ಅಗತ್ಯವೆನಿಸಿದೆ. ಜಿ.ಪಿ. ರಾಜರತ್ನಂ ಅವರ 'ರತ್ನನ ಪದಗಳು'ವಿನ ನೈಜಕರ್ತೃ ಕೈಲಾಸಂ ಎಂಬುದನ್ನು ಪೂರ್ಣಿಮಾ ಬಾಹ್ಯ ಹಾಗೂ ಕೃತಿಯ ಆಂತರಿಕ ಸಾಕ್ಷ್ಯಾಧಾರಗಳ ಮೂಲಕ ಸ್ಥಾಪಿಸಿದ್ದರು. ಕೈಲಾಸಂ ಹಾಗೂ ರಾಜರತ್ನಂ ಸ್ವಭಾವ, ಶೈಲಿಗಳ ನಡುವಿನ ಅಂತರವನ್ನು ಪೂರ್ಣಿಮಾ ಸ್ಥಾಪಿಸುತ್ತಾರೆ. ರತ್ನನ ಪದಗಳ ಮೊದಲ ಆವೃತ್ತಿ ಪ್ರಕಟವಾದಾಗ ಅದರಲ್ಲಿ ಕರ್ತೃತ್ವದ ಅಧಿಕೃತ ದಾಖಲೆ ಇಲ್ಲ. ಕರ್ತೃ ಅನಾಮಧೇಯರಾಗಿ ಉಳಿದಿದ್ದಾರೆ. ನಂತರ ಬಂದ ಆವೃತ್ತಿಯಲ್ಲಿ ರಾಜರತ್ನಂ ಕರ್ತೃತ್ವದ ದಾಖಲೆ ಇದೆ. ಪೂರ್ಣಿಮಾರ ಈ ಸಂಬಂಧಿತ ಶೋಧನ ಲೇಖನ 'ಸುಧಾ' ವಾರಪತ್ರಿಕೆಯಲ್ಲಿ ಪ್ರಕಟವಾಗುವುದಕ್ಕೆ ಅಡ್ಡಿಗಳುಂಟಾಯಿತಂತೆ. ಆ ಸಂದರ್ಭದಲ್ಲಿ ತಮ್ಮ ಶೋಧನ ಸಂಭಾವ್ಯತೆಯನ್ನು ಲಂಕೇಶ್ ಎತ್ತಿ ಹಿಡಿದಿದ್ದನ್ನು ಪೂರ್ಣಿಮಾ

*1. ಯದ್ದನಪೂಡಿ ಸುಲೋಚನಾರಾಣಿ ಅವರ ಈ ಕೃತಿಯನ್ನು 'ಅಶ್ವಿನಿ' ಅವರು 1976ರಲ್ಲಿ ಕನ್ನಡಕ್ಕೆ ತಂದಿದ್ದಾರೆ.*

*2. ರಂಗನಾಯಕಮ್ಮನವರ ಈ ಕೃತಿಯನ್ನು ಎಂ.ಜಿ. ಭೀಮರಾವ್ ಕನ್ನಡಕ್ಕೆ ತಂದಿದ್ದಾರೆ.*

ಸ್ಮರಿಸುತ್ತಾರೆ. ಮಾಸ್ತಿ, ಗೊರೂರು ಕೂಡ ಲೇಖಕಿಯ ವಾದವನ್ನು ಒಪ್ಪಿಕೊಂಡಿದ್ದರೂ ಇತರರ ವಿರೋಧವೂ ತೀವ್ರವಾಗಿ ವ್ಯಕ್ತವಾಯಿತಂತೆ. ಕೊಲೆ ಬೆದರಿಕೆಗಳೂ ಬಂದವಂತೆ.

ಕುಮಾರಿ ಯೋಗಿನಿ ಹಾಗೂ ಗುಡಿಬಂಡೆ ಪೂರ್ಣಿಮಾ ಅವರಿಗೆದುರಾದ ಸಂದರ್ಭಗಳು ಪ್ರಧಾನ ವಿಮರ್ಶಾ ಸಂಪ್ರದಾಯದ ರಾಜಕಾರಣಗಳನ್ನು ಎತ್ತಿ ತೋರಿಸುತ್ತವೆ. ಪುರಾತತ್ವ ಸಂಶೋಧನೆಯ ವಸ್ತುವನ್ನು ಕೇಂದ್ರವಾಗಿಟ್ಟುಕೊಂಡ ಅನುಪಮಾ ನಿರಂಜನರ 'ಆಳ' ಕಾದಂಬರಿ ನಾಯಕ ನಾಯಕಿಯರ ಮನದ ಎಲ್ಲ ಆಳಗಳನ್ನೂ ಶೋಧಿಸುವ ವಿನ್ಯಾಸ ಹೊಂದಿದೆ. ಅದರೊಟ್ಟಿಗೆ ಭೂಮಿಯ ಉತ್ಖನ ನಡೆದಾಗ 'ಆಳ'ದಲ್ಲಿ ಸಿಗುವ ವಸ್ತುಗಳಿಂದ ಪುರಾತನ ಸಂಸ್ಕೃತಿಯನ್ನು ಪುನರ್ ಸೃಷ್ಟಿಸುವ ಕಲ್ಪನೆಗೂ ಇಲ್ಲಿ ಸ್ಥಾನವಿದೆ. ಒಳ ಹೊರಗೆ ಎರಡೂ ಆಳಗಳಿಂದ ಅನೇಕ ವಸ್ತು, ಕಥೆಗಳನ್ನು ಹೊರತೆಗೆದು ಸಮನ್ವಯಗೊಳಿಸಲು ಅನುಪಮಾ ಯತ್ನಿಸಿದ್ದಾರೆ. ಪುರುಷ ಹಾಗೂ ಸ್ತ್ರೀ ಲೈಂಗಿಕತೆ ಕುರಿತಂತೆ ಇರುವ ಸಮಾನ ದೃಷ್ಟಿಕೋನಗಳು 'ಸಂಶೋಧಕಿ'ಯ ವೈಯಕ್ತಿಕ ಬದುಕನ್ನು ಪರಿಣಾಮಗೊಳಿಸುವ ಕಥನವಿಲ್ಲಿದೆ. ಸಂಶೋಧನೆಯನ್ನು ಆಯ್ಕೆ ಮಾಡಿಕೊಳ್ಳುವ ಮಹಿಳೆಯರು ಎದುರಿಸುವ ಸಂದಿಗ್ಧಗಳಿಗೂ ಅನುಭಾವ ಜ್ಞಾನಕ್ಷೇತ್ರವನ್ನು ಆಯ್ಕೆ ಮಾಡಿಕೊಂಡ ಅಕ್ಕಮಹಾದೇವಿ ಎದುರಿಸಿದ ದಿವ್ಯಗಳಿಗೂ ಸಂಬಂಧವಿದೆ.


ಅನುಪಮ ನಿರಂಜನ

ಮಹಿಳಾ ಸಂಶೋಧನ ವಿಮರ್ಶಾ ಪ್ರಕಾರವೇ ಪ್ರತ್ಯೇಕ ಪರಾಮರ್ಶೆಗೆ ಒಳಗಾಗುವಷ್ಟು ವಿಪುಲವಾಗಿ ಮಹಿಳಾ ಸಂಶೋಧನ ಪ್ರಬಂಧಗಳು ಪ್ರಕಟವಾಗಿವೆ. ಹಳಗನ್ನಡ ನಡುಗನ್ನಡ ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳು ಹಾಗೂ ಕವಿ ಕೃತಿ ವಸ್ತು ಧೋರಣೆಗಳನ್ನು ಉದ್ದೇಶವಾಗುಳ್ಳ ಪ್ರಬಂಧಗಳಿವು. ಭಾಷಾಶಾಸ್ತ್ರ, ಜಾನಪದ, ಶಾಸನ, ತೌಲನಿಕ ಸಾಹಿತ್ಯ ಅಧ್ಯಯನಗಳೂ ಮಹಿಳಾ ಸಂಶೋಧನಾ ಕ್ಷೇತ್ರಗೊಳಗೆ ಸ್ಥಾನ ಪಡೆದಿವೆ. ವಿಶ್ವವಿದ್ಯಾಲಯಗಳಲ್ಲಿ ಸಲ್ಲಿಕೆಯಾಗುವ ಸಂಶೋಧನ ಪ್ರಬಂಧಗಳ ಗುಣಮಟ್ಟ ಕ್ಷೀಣಿಸುತ್ತದೆ ಎಂಬ ಆರೋಪ ಮಿಶ್ರಿತ ಗೊಣಗಾಟಗಳು ಮಹಿಳಾ ವಿದ್ವತ್ತನ್ನು ಗಂಭೀರವಾಗಿ ಪರಿಗಣಿಸದಿರಲು ಸಹಾಯಕವಾಗಿವೆ. ಅತ್ಯಂತ ಶ್ರಮಪೂರ್ಣವಾಗಿ ಸಂಶೋಧನ ಮಹಾಪ್ರಬಂಧವನ್ನು ಸಲ್ಲಿಸಿದ ಸಂಶೋಧಕಿಯೊಬ್ಬರಿಗೆ ಕೇಳಿದ ಪ್ರಶ್ನೆಯಿದು: "ಸಂಶೋಧನ ಮಹಾಪ್ರಬಂಧ ನೀವೇ ಬರೆದದ್ದಾ", ಶತಮಾನದ, ದಶಮಾನದ ಸಂಶೋಧನೆಯನ್ನು ಸಂಪಾದಿಸುವ, ಮೌಲ್ಯಮಾಪನ ಮಾಡುವ ಯತ್ನದಲ್ಲಿ ಮಹಿಳೆಯರ ಸಂಶೋಧನ ಪ್ರಬಂಧಗಳನ್ನು ಅಧ್ಯಯನದ ವ್ಯಾಪ್ತಿಗೆ ತರಲೂ ನಿರಾಕರಿಸುವಂಥ ಸಂದರ್ಭವಿದೆ. ಹೀಗಾಗಿ ಬಿಡಿ ವಿಮರ್ಶಾ ಲೇಖನ ಕೃತಿಗಳಂತೆ ಪ್ರಕಟಿತ ಸಂಶೋಧನಾ ಕೃತಿಗಳೂ ಲೇಖಕಿಯ ವೈಯಕ್ತಿಕ ಸಾಧನೆಯ ಸೂಚಕಗಳಾಗಿ ನಿಂತವೇ ವಿನಃ ಮಹಿಳಾ ಸಂಶೋಧನಾ ವಿಮರ್ಶಾ ಪರಂಪರೆಯನ್ನು ರೂಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಡಾ. ಟಿ.ಎನ್. ನಾಗರತ್ನ, ಡಾ. ವೈ.ಸಿ. ಭಾನುಮತಿ, ಡಿ. ಚಂಪಾಬಾಯಿ ಮುಂತಾದ ವಿದ್ವಾಂಸರು ಪ್ರಾಚೀನ ಸಾಹಿತ್ಯ ಸಂಪಾದನೆ ಸಂಶೋಧನೆಯಲ್ಲಿ ತಮ್ಮನ್ನು ಗಂಭೀರವಾಗಿ ತೊಡಗಿಸಿಕೊಂಡವರು. ಹಸ್ತಪ್ರತಿಗಳ ಓದು, ಪಾಠ ನಿರ್ಣಯ, ಪಾಠ ಪರಿಷ್ಕರಣ, ಕವಿಯ ಕರ್ತೃತ್ವ, ದೇಶಕಾಲ ವಿಚಾರ, ಕೃತಿಯ ಸಾಮಾಜಿಕ ವಿಚಾರ, ಛಂದಸ್ಸು, ಕಠಿಣ ಪದಾರ್ಥ ಇತ್ಯಾದಿ ಶ್ರಮದಾಯಕ ಕಾರ್ಯವನ್ನು ಕೈಗೊಳ್ಳುತ್ತಾ ಮನ್ನಣೆಯ ಕೊರತೆ ನಡುವೆಯೂ 'ಜ್ಞಾನಪ್ರೇಮ'ದ ಕಾರಣಕ್ಕಾಗಿ ಈ ಕ್ಷೇತ್ರದಲ್ಲಿ ಅವರು ತೊಡಗಿದ್ದಾರೆ. ಇಷ್ಟಾದರೂ ಸಂಶೋಧನ ಕಮ್ಮಟ, ಶಿಬಿರ ವಿಚಾರಗೋಷ್ಠಿಗಳಿಗೆ ಸಂಪನ್ಮೂಲ ವ್ಯಕ್ತಿಗಳಾಗಬಲ್ಲ ಇವರ ಸಾಧನೆಯನ್ನು ಗುರುತಿಸದೆ ಅಕೆಡೆಮಿಕ್ ವಲಯ ತೋರುವ ದಿವ್ಯನಿರ್ಲಕ್ಷ್ಯ ಅರ್ಥವಾಗದ್ದು ಕನ್ನಡ ಸಂಶೋಧನೆಯರ ಮಹತ್ವದ ಸಂಶೋಧನ ಲೇಖನಗಳು ಕನ್ನಡ ಸಂಭಾವನಾಗ್ರಂಥಗಳಲ್ಲಿಯೂ ವಿದ್ವತ್‌ಪತ್ರಿಕೆಗಳಲ್ಲಿಯೂ ಹಂಚಿಹೋಗಿದ್ದು ಪೂರ್ಣ ಪ್ರಮಾಣದ ಸ್ವಂತ ವಿಮರ್ಶಾ ಸಂಶೋಧನಾ ಕೃತಿಗಳನ್ನು ಹೊರತರದಿದ್ದದ್ದೂ ಅವರ ಪ್ರಯತ್ನಗಳಿಗೆ ಬೆಲೆ ದೊರೆಯದಿರಲು ಕಾರಣ. ಭಾಷಾವಿಜ್ಞಾನಿ ಸುಶೀಲಾ ಉಪಾಧ್ಯಾಯರ ಕಾರ್ಯದ ಬಗ್ಗೆ ಪ್ರತಿಕೂಲ ಪ್ರತಿಕ್ರಿಯೆಗಳು ವ್ಯಕ್ತವಾದಾಗ ಅವನ್ನು ಸುಶೀಲಾ ಉಪಾಧ್ಯಾಯ ಸ್ವೀಕರಿಸಿದ ರೀತಿ ಇದು:

"......ನಿಘಂಟು ಯೋಜನೆ ಪ್ರಾರಂಭಮಾಡಿ ಎರಡು ತಿಂಗಳಲ್ಲಿಯೇ ಒಬ್ಬರು ಕನ್ನಡ ಪ್ರಾಧ್ಯಾಪಕರು ಏನು 'ಅ'ಕಾರದಿಂದ 'ಅಂ' 'ಅಃ'ದ ವರೆಗೆ ಬಂತೋ ನಿಮ್ಮ ನಿಘಂಟು ಎಂದು ಕೇಳಿದಾಗ ಆ ಪ್ರಾಧ್ಯಾಪಕರ ಬಗ್ಗೆ ಸಿಟ್ಟು ಬರಲಿಲ್ಲ, ಅವರ ಅಜ್ಞಾನದ ಬಗ್ಗೆ ಕನಿಕರವುಂಟಾಯಿತು...... ಹರಿಜನರ ಕೇರಿಗೆ ಯಾಕೆ ಹೋಗುತ್ತೀರಿ ಪೇಜಾವರ ಸ್ವಾಮಿಗಳ ಹಾಗೆ ಎಂದು ಒಬ್ಬರ ಚುಚ್ಚುನುಡಿಯಾದರೆ ಇದಕ್ಕೆ ವ್ಯತಿರಿಕ್ತವಾಗಿ ಇನ್ನೊಬ್ಬರು ಬ್ರಾಹ್ಮಣರ ತುಳು ಸರಿಯಾದ ತುಳುವಲ್ಲ. ಆ ತುಳುವನ್ನಾಡುವ ನೀವು ಬ್ರಾಹ್ಮಣೇತರರ 'ನಿಜ'ವಾದ ತುಳುವಿನ ಬಗ್ಗೆ ಏನು ಸಂಶೋಧನೆ ಮಾಡಬಲ್ಲಿರಿ" ಎಂಬ ಕೊಂಕುನುಡಿ *(ಶಬ್ದಾತೀತ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, 1997, ಪು.18).*

ಮಹಿಳಾ ಸೃಜನಶೀಲತೆ, ಸಂಶೋಧನೆ, ವಿಮರ್ಶೆಗಳನ್ನು ಸೂಕ್ಷ್ಮವಾಗಿ ಅಪ್ರಧಾನಗೊಳಿಸುವ, ಅಂಚಿಗೆ ಒತ್ತರಿಸುವ ಸಂಸ್ಕೃತಿ ಚಿಂತನೆಗಳು ಈ ಹೊತ್ತೂ ಹೆಚ್ಚು ಚಲಾವಣೆಯಾಗುತ್ತಿವೆ. ಅದೆಂದರೆ, 'ಮಹಿಳೆ' ಎಂಬ ಪ್ರತ್ಯೇಕಿತ ನೆಲೆಯ ಸದವಕಾಶವನ್ನು ಪಡೆದ ಮಹಿಳಾ ಸೃಜನಶೀಲತೆ ಹಾಗೂ ಸಾಹಿತ್ಯ ಅಧ್ಯಯನಗಳು ಕೆನೆಪದರದ ಶಿಷ್ಟ ಮೇಲು ಜಾತಿ, ವರ್ಗದ ಮಹಿಳೆಯರಿಗೆ ಮಾತ್ರ ಮೀಸಲಾಗುತ್ತಿವೆ ಎಂಬ ಆರೋಪ ಕೇಳಿಬರುತ್ತಿದೆ. ಮಹಿಳಾ ವಿಮರ್ಶೆ, ಸಂಶೋಧನೆಗಳಿಗಿರುವ ಪ್ರತಿರೋಧಗಳ ಹಿಂದಿರುವ ರಾಜಕಾರಣವನ್ನು ಮರೆಮಾಚಲು ಇಂಥ ಆರೋಪಗಳು ಜಾಣತನದಿಂದ ಪ್ರಯತ್ನಿಸುತ್ತಿವೆ. ಬಡ ದಲಿತ ಕಾರ್ಮಿಕ ಹೋರಾಟಗಳಲ್ಲಿ ಕ್ರಿಯಾಶೀಲರಾಗಿ ತಮ್ಮ ಸಾಹಿತ್ಯಕ ಸಂವೇದನೆಗಳನ್ನು ಕಟ್ಟಿಕೊಂಡ ದು. ಸರಸ್ವತಿಯಂಥ ಲೇಖಕಿಗೆ 'ಜ್ಞಾತೃ'ತ್ವ ಅಧಿಕಾರದ ಪ್ರಶ್ನೆ ತೀವ್ರವಾಗಿಯೇ ಕಾಡಿದೆ. ಈ ಸ್ವವಿಮರ್ಶಾತ್ಮಕ ನಿಲುವನ್ನು ನಮ್ಮ ಲೇಖಕಿಯರು ಸಾಕಷ್ಟು ಸಮರ್ಥವಾಗಿಯೇ ಹೊಂದಿದ್ದಾರೆ. ಹಾಗಾಗಿ ಪ್ರತಿಷ್ಠಿತ ವಲಯದ ಸಂಸ್ಕೃತಿ ಚಿಂತಕರೂ ಸಾಹಿತ್ಯ ವಿಮರ್ಶಕರೂ ವ್ಯಕ್ತಪಡಿಸುವ ಇಂಥ ಆಪಾದನೆ ನಿರಾಧಾರವೆನ್ನಬಹುದು. ❑

*Edited, Printed, Published and owned by Rajeshwari H.S., No. 114/5, 9th Cross, 2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*



## ರೇಷ್ಮೆ ಇಲಾಖೆ

# ರೇಷ್ಮೆ ಕೃಷಿಕರು / ಉದ್ದಿಮೆದಾರರಿಗೆ ಸರ್ಕಾರದ ಉತ್ತೇಜನ



ಕರ್ನಾಟಕ ರೇಷ್ಮೆ ಉದ್ಯಮಕ್ಕೆ ಪ್ರಶಸ್ತವಾದ ತಾಣ. ಸರ್ಕಾರವು ರೇಷ್ಮೆ ಕೃಷಿ ಅಭಿವೃದ್ಧಿಗೆ ಎಲ್ಲಾ ರೀತಿಯ ನೆರವು ಪ್ರೋತ್ಸಾಹ ನೀಡುತ್ತಿದೆ. ಕೃಷಿ ಬೆಳೆಗಾರರು ಮತ್ತು ಉದ್ಯಮದಲ್ಲಿ ತೊಡಗಿರುವ ರೀಲರ್‌ಗಳ ಹಿತರಕ್ಷಣೆಗೆ ಪೂರಕವಾದ ನೀತಿ ನಿಯಮಗಳನ್ನು ರೂಪಿಸಿ ಜಾರಿಗೊಳಿಸಿದೆ.

- ರೇಷ್ಮೆ ವರದಾನ ಯೋಜನೆಯಡಿ 1200 ಹೆಕ್ಟೇರ್ ಪ್ರದೇಶದಲ್ಲಿ ಹೊಸದಾಗಿ **ಹಿಪ್ಪುನೇರಳೆ ನಾಟಿಗೆ** ರೂ.140.50 ಲಕ್ಷಗಳನ್ನು ಪ್ರೋತ್ಸಾಹ ಧನವಾಗಿ ನೀಡಲಾಗಿದೆ.
- ಕೇಂದ್ರ ಪುರಸ್ಕೃತ ಕೆಟಲಿಟಿಕ್ ಅಭಿವೃದ್ಧಿ ಯೋಜನೆಯಡಿ 1900 ಹೆಕ್ಟೇರ್ ಹಿಪ್ಪುನೇರಳೆ ಪ್ರದೇಶದಲ್ಲಿ **ಹನಿ ನೀರಾವರಿ ಘಟಕಗಳ** ಅಳವಡಿಕೆಗೆ ರೂ.697.00 ಲಕ್ಷಗಳ ಸಹಾಯಧನ ನೀಡಲಾಗಿದೆ.
- ಕೇಂದ್ರ ಪುರಸ್ಕೃತ ಕೆಟಲಿಟಿಕ್ ಅಭಿವೃದ್ಧಿ ಯೋಜನೆಯಡಿ 2510 ಪ್ರತ್ಯೇಕ **ಹುಳು ಸಾಕಾಣಿಕೆ ಮನೆ** ನಿರ್ಮಾಣಕ್ಕೆ ರೂ.1632.00 ಲಕ್ಷಗಳ ಸಹಾಯಧನ ನೀಡಲಾಗಿದೆ.
- ರೇಷ್ಮೆ ವರದಾನ ಯೋಜನೆಯಡಿ 375 ಹಣ್ಣು **ಹುಳುವಿನ ಮನೆ** (ಮೌಂಟಿಂಗ್ ಹಾಲ್) ಗಳ ನಿರ್ಮಾಣಕ್ಕೆ ರೂ.140.45 ಲಕ್ಷಗಳ ಸಹಾಯಧನವನ್ನು ನೀಡಲಾಗಿದೆ.
- ಕೇಂದ್ರ ಪುರಸ್ಕೃತ ಕೆಟಲಿಟಿಕ್ ಅಭಿವೃದ್ಧಿ ಯೋಜನೆಯಡಿ 773 ಫಲಾನುಭವಿಗಳಿಗೆ ಚಾಕಿ ಸಾಕಾಣಿಕೆ ಕಟ್ಟಡ ನಿರ್ಮಾಣ ಹಾಗೂ ರೇಷ್ಮೆ ಹುಳು ಸಾಕುವ ಸಲಕರಣೆಗಳ ಖರೀದಿಗೆ ರೂ.127.68 ಲಕ್ಷಗಳ ಸಹಾಯಧನವನ್ನು ನೀಡಲಾಗಿದೆ.
- ಕೇಂದ್ರ ಪುರಸ್ಕೃತ ಕೆಟಲಿಟಿಕ್ ಅಭಿವೃದ್ಧಿ ಯೋಜನೆಯಡಿ ಇಬ್ಬರು ರೇಷ್ಮೆ ನೂಲು ಬಿಚ್ಚಾಣಿಕೆದಾರರಿಗೆ **ಸ್ವಯಂಚಾಲಿತ ರೀಲಿಂಗ್ ಯಂತ್ರಗಳನ್ನು** ಅಳವಡಿಸಲು ರೂ.150 ಲಕ್ಷಗಳ ಸಹಾಯ ಧನವನ್ನು ನೀಡಲಾಗಿದೆ.
- **ಆರೋಗ್ಯ ವಿಮೆ ಯೋಜನೆಯಡಿ** 10,000 ರೇಷ್ಮೆ ಬೆಳೆಗಾರರು ಹಾಗೂ ರೀಲರ್‌ಗಳಿಗೆ ರೂ.72.60 ಲಕ್ಷಗಳನ್ನು ವಿಮಾ ಕಂತಾಗಿ ಸಂದಾಯ ಮಾಡಲಾಗಿದೆ.
- ವಿವಿಧ ಯೋಜನೆಗಳಡಿ ರೇಷ್ಮೆ ನೂಲು ಬಿಚ್ಚಾಣಿಕೆದಾರರಿಗೆ ರೂ.590.00 ಲಕ್ಷಗಳ **ಪ್ರೋತ್ಸಾಹ / ಸಹಾಯಧನ** ನೀಡಲಾಗಿದೆ.
- ಮೈಸೂರು ಬಿತ್ತನೆ ಪ್ರದೇಶದ ರೇಷ್ಮೆ ಬೆಳೆಗಾರರ ಹಿತರಕ್ಷಣೆಗಾಗಿ ರೂ.107.40 ಲಕ್ಷಗಳನ್ನು **ಬೋನಸ್ / ಸಹಾಯಧನವಾಗಿ** ನೀಡಲಾಗಿದೆ.
- **ಪರಿಶಿಷ್ಟ ಜಾತಿ / ಪಂಗಡದ** ರೇಷ್ಮೆ ಬೆಳೆಗಾರರು / ರೀಲರುಗಳಿಗೆ ಪ್ರತ್ಯೇಕ ಯೋಜನೆಗಳಿದ್ದು ರೂ.315.00 ಲಕ್ಷಗಳ ಸೌಲಭ್ಯಗಳನ್ನು ಒದಗಿಸಲಾಗಿದೆ.
- **ಸಾಲ ಯೋಜನೆಯಡಿ** ರೇಷ್ಮೆ ಕೃಷಿ ಚಟುವಟಿಕೆಗಳಿಗೆ 3120 ಫಲಾನುಭವಿಗಳಿಗೆ ವಾಣಿಜ್ಯ ಸಂಸ್ಥೆಗಳ ಮೂಲಕ ರೂ.2547.10 ಲಕ್ಷಗಳ ಸಾಲವನ್ನು ಒದಗಿಸಲಾಗಿದೆ.
- ರಾಜ್ಯ / ಜಿಲ್ಲಾ ಮಟ್ಟದ ಪ್ರಗತಿಪರ ರೇಷ್ಮೆ ಕೃಷಿಕರ / ರೀಲರುಗಳ ಪ್ರಗತಿಯನ್ನು ಆಧರಿಸಿ ಇಲಾಖೆಯಿಂದ ನಗದು ಬಹುಮಾನ ನೀಡಿ ಪ್ರೋತ್ಸಾಹಿಸಲಾಗುತ್ತಿದೆ.

**2009-10ನೇ ಸಾಲಿನಲ್ಲೂ ಮೇಲ್ಕಂಡ ಯೋಜನೆಗಳು ಅನುಷ್ಠಾನದಲ್ಲಿದ್ದು ಇವುಗಳ ಪ್ರಯೋಜನವನ್ನು ಪಡೆಯಲು ರೇಷ್ಮೆ ಇಲಾಖೆಯ ಸ್ಥಳೀಯ ಅಧಿಕಾರಿಗಳನ್ನು ಸಂಪರ್ಕಿಸಿ.**

 ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದ ಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆ ಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆ ಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸ ಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ
ಚಾಮರಾಜಪೇಟೆ
ಬೆಂಗಳೂರು - 560 018